# ಹೊಳೆಸಾಲಿನ ಮರ

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

**ಕ್ಷಮಾ ಪ್ರಕಾಶನ**
2263, 22ನೆಯ ಅಡ್ಡ ರಸ್ತೆ
ಬನಶಂಕರಿ ಎರಡನೆಯ ಹಂತ, ಬೆಂಗಳೂರು–70
ದೂರವಾಣಿ ನಂ. 621964

# ಸ್ನೇಹದ ಹಾರೈಕೆ

ಸ್ನೇಹ ಹಲವು ರೂಪಗಳನ್ನು ತಳೆಯುತ್ತದೆ. ನನ್ನ ಸ್ನೇಹಿತರಾದ ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ತಮ್ಮ ಈ ಕವನ ಸಂಗ್ರಹಕ್ಕೆ ನಾನು ಮುನ್ನುಡಿ ಬರೆಯ ಬೇಕೆಂದು ಆಶಿಸಿದ್ದಕ್ಕೆ ಕಾರಣ, ನನ್ನ ಹೆಸರು ಅವರ ಒಂದು ಕೃತಿಯೊಡನೆ ಸೇರಿರಬೇಕೆಂಬ ವಿಶ್ವಾಸದ ಅಪೇಕ್ಷೆ. ಇಂದು ಕನ್ನಡ ಸಾಹಿತ್ಯದ ಯಾವ ವಿದ್ಯಾರ್ಥಿಯೂ ಉಪೇಕ್ಷಿಸಲಾಗದ ಕವಿ, ಉಪೇಕ್ಷಿಸಲಾಗದ ವಿಮರ್ಶಕ, ಶ್ರೇಷ್ಠ ಪ್ರಾಧ್ಯಾಪಕ ಎನಿಸಿದ ಇವರ ಸಂಗ್ರಹಕ್ಕೆ ವಾಸ್ತವವಾಗಿ ನನ್ನ ಮುನ್ನುಡಿಯ ಅಗತ್ಯ ಇಲ್ಲವೇ ಇಲ್ಲ.

ಡಾ. ಲಕ್ಷ್ಮೀನಾರಾಯಣ ಭಟ್ಟರ ಈ ಸಂಗ್ರಹ ನನಗೆ ತುಂಬಾ ಸಂತೋಷವನ್ನು ಕೊಟ್ಟಿದೆ. ಪ್ರಸಿದ್ಧ ಇಂಗ್ಲಿಷ್ ಕವಿ ಜಾನ್ ಕೀಟ್ಸ್ ಒಮ್ಮೆ ಹೇಳಿದ, 'ಗಿಡಕ್ಕೆ ಎಲೆ ಬರುವಷ್ಟು ಸಹಜ ವಾಗಿ ಕಾವ್ಯ ಬರಬೇಕು, ಇಲ್ಲವಾದರೆ ಬರುವುದೇ ಬೇಡ' ಎಂದು. ಈ ಕವನಗಳಲ್ಲಿ ಕಾವ್ಯ ಅಷ್ಟೇ ಸಹಜವಾಗಿ ರೂಪ ತಾಳಿ ದಂತೆ ಭಾಸವಾಗುತ್ತದೆ. ಆದರೆ ಇದರ ಹಿಂದೆ ಸುಮಾರು ಇಪ್ಪತ್ತು ವರ್ಷಗಳ ಶ್ರದ್ಧಾವಂತ ಅಭ್ಯಾಸವಿದೆ, ಪ್ರಯೋಗ ವಿದೆ, ಯಶಸ್ವಿ ಕಾವ್ಯರಚನೆ ಇದೆ.

'ಶಿವಮೊಗ್ಗಿಯಲ್ಲಿ ಮಳೆ–1946' ಈ ಕವಿಯ ಈ ದಿನ ಗಳ Characteristic ಕವನ, ಪ್ರಾತಿನಿಧಿಕ ಕವನ ಎಂದು ನಾನೆಂದುಕೊಂಡಿದ್ದೇನೆ. ನಿಸರ್ಗದ ಒಂದು ಶಕ್ತಿಯ ಆವೇಶದ ಅಭಿವ್ಯಕ್ತಿಯ ದರ್ಶನ ನಮಗಿಲ್ಲಿ ಪರಿಣಾಮಕಾರಿಯಾಗಿ ಆಗು ತ್ತದೆ. ಪ್ರಾರಂಭದ ಪಂಕ್ತಿಗಳ ಚಿತ್ರಗಳು ಕಣ್ಣಿಗೆ ಮಾತ್ರ ವಲ್ಲದೆ ಬೇರೆ ಇಂದ್ರಿಯಗಳಿಗೂ ಅನುಭವಕ್ಕೆ ಬರುವುದರಿಂದ ('ಸಹಸ್ರ ಮೊಳೆ' 'ಊರಿನ ಕೆನ್ನೆಗೆ ಪಟ ಪಟ ಬಾರಿಸಿ ಬೈಯುತ ವಟ ವಟ','ಕೂಗುತ ಬರುತ್ತಿದೆ') ಈ ಆವೇಶದ ಸಮಗ್ರ ಅನು ಭವವಾಗುತ್ತದೆ. ಚಿತ್ರಗಳ ನಂತರ ಈ ಅನುಭವ ಮನಸ್ಸಿನ

ಮೇಲೆ ಮಾಡುವ ಪರಿಣಾಮ ಒಂದು ಪದದಲ್ಲಿ ಸೂಚಿತವಾಗುತ್ತದೆ : 'ದಿಗಿಲು', ಆದರ ಮುಂದಿನ ಭಾಗದಲ್ಲಿ ಈ ಅನುಭವ ಬಾಳಿನಸಂತೋಷದ ಅಥವಾ ಸೃಜನಪ್ರವೃತ್ತ ಅನುಭವಗಳೊಡನೆ ('ಪ್ರಿಯನ ಮೊದಲ ಮುತ್ತಿಗೆ ನಾಚಿದ ಕನ್ನೆಯ ಕೆನ್ನೆ', 'ರಜಸ್ವಲೆಯ ಕೆದರಿದ ದಳ', 'ಕದಡಾರತಿಯ ಜಲ', 'ಮಣ್ಣ ಬಿಲಕ್ಕೆ ಬೆಣ್ಣೆ ತಳ'–ಈ ಕಡೆಯ ಪ್ರತಿಮೆಯ ಸಂಕೀರ್ಣತೆಯನ್ನು ಗಮನಿಸಬೇಕು) ತಳಕು ಹಾಕಿಕೊಂಡು, ಅಭಿವ್ಯಕ್ತಿ ಪಡೆಯುತ್ತಿರುವ ಶಕ್ತಿಯ ಸಂಕೀರ್ಣತೆ ಮನಸ್ಸಿನಲ್ಲಿ ಮೂಡುತ್ತದೆ. ಇದೇ ಅನುಭವ ಮುಂದಿನ ಭಾಗಗಳಲ್ಲಿ ಪುನರಾವೃತ್ತವಾಗುತ್ತದೆ, ಆದರೆ ಸಂಕೀರ್ಣತೆ ಬೇರೆ ರೀತಿಯದು, ಮಳೆ ತಂದಿರುವುದು ಪುಂಡ ಗಾಳಿಯನ್ನು, ಕಿಟಕಿಯಲ್ಲಿ ಹಣಿಕಿ ಪೋಲಿಕೂಗುವ ಪಡ್ಡೆಗಾಳಿಯನ್ನು, ಅಲ್ಲದೆ 'ತುಂಗೆಗೆ ಗಂಗೆಯಾಗುವ ಮನ', 'ಜಲಕ್ಕೆ ನೆಲ ನುಂಗುವ ಆವೇಶ'. ಇದರ ಜೊತೆಗೇ 'ಜಾರಿ ತೂರಿ ಹೋರಾಡಿಬರುವ ಉಕ್ಕಡ ಬುಗುರಿ' 'ಜೀವದ ಜೊತೆ ಅಂಬಿಗರ ಹುಚ್ಚಾಟ', 'ಹೊಳೆಗಿಳಿದಾನೆಗಳ ಮೋಜಿನ ನೀರಾಟ', ಜನ ಹೂವು ಅಕ್ಷತೆ ಕಾಸು ಎಸೆಯುತ್ತಾರೆ, ಹೆಂಗಸರು ನೂರಾರು ದೊನ್ನೆದೀಪ ತೇಲಿಬಿಡುತ್ತಾರೆ. ಕವನದ ಮುಕ್ತಾಯ ಸಾಗುವುದು ನಿತ್ಯಜೀವನದ ನಿರಾಡಂಬರ, ನೆಮ್ಮದಿ, ಸ್ನೇಹಗಳತ್ತ, ಪ್ರೀತಿಯಿಂದ ಕಲೆತು ಊಟ ಮಾಡುವ ಬೆಚ್ಚನೆ ಬದುಕಿನತ್ತ, the essential joy of sheer livingನತ್ತ. ನಿಸರ್ಗದ ಜೀವಿಗಳು, ಮನುಷ್ಯರು ಎಲ್ಲವನ್ನೂ ಮುಟ್ಟಿ ಪ್ರಭಾವ ಬೀರುತ್ತ ಸೃಷ್ಟಿಯನ್ನು ಒಂದಾಗಿ ಕಾಣಿಸುವ ಶಕ್ತಿಯೊಂದರ ದರ್ಶನ ಇದು.

ಲಕ್ಷ್ಮೀನಾರಾಯಣ ಭಟ್ಟರ ಹಲವು ಕವನಗಳಲ್ಲಿ ಒಂದು ವಿಶಿಷ್ಟವಾದ, traumatic ಎನ್ನಬಹುದಾದ, ಅನುಭವಕ್ಕೆ ಜೀವ ಹೊಂದಿಕೊಳ್ಳುವ, ಹಾಗೆ ಹೊಂದಿಕೊಳ್ಳುವ ಪ್ರಕ್ರಿಯೆಯಲ್ಲೇ ಜಾಗೃತವಾಗುವ ದರ್ಶನವಿದೆ. ಮನುಷ್ಯನ

ಪುನಶ್ಚೇತನ ಪ್ರಕ್ರಿಯೆ ಇಲ್ಲಿನ ಕವನಗಳಲ್ಲಿ ಮತ್ತೆ ಮತ್ತೆ ರೂಪ ತಾಳುತ್ತದೆ. ಈ ಕವಿಯ ಕವನಗಳಲ್ಲಿ ಯಾತ್ರೆಯ ಪ್ರತಿಮೆ ಪುನಃ ಪುನಃ ಬಳಕೆಯಾಗುವುದು ಆಶ್ಚರ್ಯವಲ್ಲ. ಯಾತ್ರೆಯು ಮನುಷ್ಯಜೀವನ ತನ್ನ ಶಕ್ತಿಯನ್ನು ವರ್ಧಿಸಿಕೊಳ್ಳುವ ಒಂದು ಪ್ರಯತ್ನ. 'ನನ್ನ ನೆನಪಿನ ಯಾತ್ರೆ'ಯಲ್ಲಿ ಯಾವುದೋ ಶಕ್ತಿ ದೈವವೋ ದೆವ್ವವೋ–ದೂಡಿದಂತೆ ಕಡಲ ಆಳಕ್ಕಿಳಿದು ಬೆಟ್ಟವನ್ನೇರಿ ಕಡೆಗೆ ಸಮತಟ್ಟು ನೆಲವನ್ನು ತಲಪಿದ ಮನುಷ್ಯ ಕೇಳುತ್ತಾನೆ :

ಚಾಣ ಸುತ್ತಿಗೆ ಕೈಯ ಕೌಶಲವ ಹಾಡುತ್ತ
ಮೈಪಡೆಯದೇ ಶಿಲ್ಪ ಬಂಡೆಯಿಂದ !
ಹಡೆವ ಬಲ ಕೊಡುವ ಛಲ ಜೊತೆಗೂಡಿ ಎತ್ತಿರಲು
ಭಾರಿ ಮರ ಏಳದೇ ಕಾಳಿನಿಂದ ?

ಪುನರ್ಜನ್ಮ ಅಥವಾ ಪುನಶ್ಚೇತನದ ವಸ್ತು 'ಹೊಸ ಸಂವತ್ಸರಕ್ಕೆ' ಕವನದಲ್ಲಿ ಸಹಜವಾಗಿಯೇ ಪ್ರಕಟವಾಗುತ್ತದೆ. ಈ ಗಂಭೀರವಾದ ವಸ್ತು ಅತಿಗಂಭೀರತೆ (solemnity) ಇಲ್ಲದೆ ಒಬ್ಬ ಸಾಮಾನ್ಯ ಮನುಷ್ಯನ ಜೀವನದಲ್ಲೆನುವಂತೆ ನಿರಾಡಂಬರವಾಗಿ ಒಂದು ಕವನದಲ್ಲಿ ಹಬ್ಬುತ್ತದೆ. 'ಯಾರು ಬಂದರೆ ತಾನೆ ಏನು ?' ಕವನದಲ್ಲಿ ಸಾವಿನ ಚಿಂತನೆ ನವಿರಾಗಿ, ಸೂಕ್ಷ್ಮವಾಗಿ ಪ್ರಕಟವಾಗುತ್ತದೆ. ವೃದ್ಧಾಪ್ಯದಲ್ಲಿ ಜೀವ ಇಡೀ ಬಾಳನ್ನು ಸಮೀಕ್ಷಿಸುತ್ತಿದೆ. ಯಾರು ಬಂದರೆ ತಾನೆ ಏನು ?

ಬಂದು ಮುಟ್ಟಲಿ ನನ್ನ, ಮುಚ್ಚಿ ಬಿಡಿಸಲಿ ಸಣ್ಣ
ಪಂಜರದಿ ಸೆರೆಸಿಕ್ಕ ಗುಟ್ಟುಗಳ ಸಂತೆ
ಹಕ್ಕಿ ಹಾರಲಿ ಬಿಡಿ ಬಾನಿನಲ್ಲಿ
ಸುಖವುಕ್ಕಿ ಈಜಲಿ ಬೆಳಕ ಕಡಲಿನಲ್ಲಿ
ದೂರ ಮಣಿಯಾಗುತ್ತ ಸಮೆದು ಕಣವಾಗುತ್ತ
ತಾನೆ ಬಾನಾಗುತ್ತ ಕಾಣದಲ್ಲಿ

ಬಾಳಿನ ಎಲ್ಲೆ ದಾಟುವ, ದಾಟಿದನಂತರದ ನಿಗೂಢ ಅನುಭವವನ್ನು ಅನ್ಯಾರ್ಥದ ಮೂಲಕ ಯಶಸ್ವಿಯಾಗಿ ದಕ್ಕಿಸಿ ಕೊಳ್ಳುವುದನ್ನು 'ವಾಹನದ ಗೀಳಿ'ನಲ್ಲಿ ಕಾಣಬಹುದು. ನನ್ನ ದೃಷ್ಟಿಯಲ್ಲಿ ಇದೊಂದು ವಿಶಿಷ್ಟವಾದ ಕವನ. ಕವನದ ಕೇಂದ್ರ ಅನುಭವ ವಾಸ್ತವವಾಗಿ ಗಾಢವಾದದ್ದು, ಅನನ್ಯ ಸ್ವರೂಪದ್ದು. ಇದನ್ನು 'ರಿಯಲೈಸ್' ಮಾಡಲು, ಹಿಡಿದಿಡಲು ಬಳಸುವ ಅನ್ಯಾರ್ಥದಲ್ಲಿನ ಮುಖ್ಯ ಘಟನೆಯೂ ಮೈನಡುಗಿಸುವಂಥದೇ- ವಾಹನ ನಡೆಸುವ ಮನುಷ್ಯ ಲಾರಿಯ ಬುಡಕ್ಕೆ ಸಿಕ್ಕಿ ಸಾಯು ವುದು. ಆದರೆ ಪ್ರಾರಂಭದ ಪಂಕ್ತಿಗಳ ಧಾಟಿಯಿಂದ ಇದರ ತೀವ್ರತೆ ಕಡಿಮೆಯಾಗಿ, ನಾವು ಭಾವೋತ್ಕಟತೆಯಿಂದ ಮುಂದೆ ಆಗುವುದಕ್ಕೆ ಸಾಕಷ್ಟು ಗಮನ ಕೊಡದಿರುವುದನ್ನು ತಡೆಯು ತ್ತದೆ. ಇದನ್ನು ಬೇರೆ ಮಾತಿನಲ್ಲಿ ಹೇಳುವುದಾದರೆ ಭಾಷೆ ಮತ್ತು ಧಾಟಿಗಳು ಈ ಉತ್ಕಟ ಭಾವವನ್ನೂ ಅಡಗಿಸಿಕೊಳ್ಳ ಬಲ್ಲವಾಗುತ್ತವೆ. ಕವನದ ಮುಂದಿನ ಭಾಗದಲ್ಲಿ ಭಾವತೀವ್ರತೆ ಇಲ್ಲವಾದರೂ ಪರಿಣಾಮವನ್ನುಂಟುಮಾಡುವುದು ಸಾಧ್ಯವಾಗು ತ್ತದೆ. ವಿವೇಚನಾವಂತನಿಗೆ ಒಂದು ವಾಹನದ ಬಗೆಗೆ ಎಷ್ಟು ಮೋಹವಿರಬಹುದು ಎಂಬ ಪ್ರಶ್ನೆ ಕ್ರಮೇಣ ಒಬ್ಬ ವಿವೇಚನಾ ವಂತನಿಗೆ ದೇಹ ಎನ್ನುವ ವಾಹನದ ಬಗೆಗೆ ಎಷ್ಟು ಮೋಹವಿರ ಬಹುದು ಎನ್ನುವ ಪ್ರಶ್ನೆಯಾಗಿ ಮನಸ್ಸಿನ ಯಾವುದೋ ಮೂಲೆಯಲ್ಲಿ ರೂಪತಾಳುತ್ತದೆ. 'ಕನಸಿ'ನ ಅರ್ಥ ವಿಸ್ತಾರ ವಾಗುತ್ತದೆ. ಶಬ್ದಕ್ಕೆ ಸಿಲುಕದ ಅನುಭವವನ್ನು ಹಿಡಿ ದಿಡುವ ಈ ಕವನ ಇಂದ್ರಿಯಾನುಭವವನ್ನು ಬಿಟ್ಟು ಹೋಗುವು ದಿಲ್ಲ ಎನ್ನುವುದನ್ನೂ ಇಡೀ ಕವನ ನಿತ್ಯಜೀವನದಲ್ಲಿ ವಾಹನದ ಗೀಳು ಸುಪ್ತಪ್ರಜ್ಞೆಯಿಂದ ತರಬಹುದಾದ ಎಚ್ಚರಿಕೆಯ ಮಟ್ಟ ದಲ್ಲಿ ತೀರ ಸಂಭಾವ್ಯ ಎನ್ನುವುದನ್ನೂ ಗಮನಿಸಬೇಕು. ವೃತ್ತಾಂ ತದ ಒಂದು ಉಪಾಯ (ಡಿವೈಸ್) ಎನ್ನಿಸಬಹುದಾದ ಕನಸು ಪಡೆದುಕೊಳ್ಳುವ ವಿಶಾಲವಾದ ಅರ್ಥವನ್ನೂ ಲಕ್ಷಿಸಬೇಕು.

ಈ ಸಂಗ್ರಹದ ಕವನಗಳ ರೀತಿ ಭಾವಗೀತಾತ್ಮಕತೆಯನ್ನು ಒಳಗೊಂಡೂ ಅನುಭವವನ್ನು ಸ್ವಲ್ಪ ದೂರ ಇರಿಸಿ 'ಕಾಮೆಂಟ್' ಮಾಡುವ ರೀತಿ. 'ಕಾಮೆಂಟ್'ಗಳೆಲ್ಲ ಬರುವುದು ಬಾಳು ಪರಿಪೂರ್ಣವಾಗಬೇಕು, ಪರಿಪಕ್ವವಾಗಬೇಕು ಎಂಬ ಹಂಬಲದಿಂದ. ಬಾಳಿನಲ್ಲಿರುವ ಭ್ರಷ್ಟತೆಯ ಸಾಧ್ಯತೆಯನ್ನು ಗುರುತಿಸಿದ ಜೀವದ ಹಂಬಲು ಇದು. ನಡುರಾತ್ರಿ ಬಂದು ಬಾಗಿಲನ್ನು ಬಡಿದು, ಕಾಲಮೇಲೆ ಬಿದ್ದು ಮುಳಮುಳನೆ ಅಳುವ, ದೀನಮುಖ ಮಾಡಿ ಬೇಡುವ 'ದೆವ್ವಗಳು' ಏನು ಮಾಡಬಲ್ಲವೆಂಬುದನ್ನು ತಿಳಿದ ಜೀವ ಇದು :

ಒಳಗಡೆ ಮಗು ಚೀರಿತೆನ್ನಿ
ಕತ್ತು ಹಿಸುಕಿ ಕೊಂದಲ್ಲದೆ
ನಿದ್ದೆ ಬರುವುದಿಲ್ಲ

ಲಕ್ಷ್ಮೀನಾರಾಯಣ ಭಟ್ಟರ ಇಲ್ಲಿನ ಕವನಗಳಲ್ಲಿ ಒಂದು ಚೇತನ ದೀರ್ಘ ಕಾಲ, ವಿಶಾಲ ಆಕಾಶ(space)ಗಳ ಅರಿವನ್ನು ಸದಾ ಜಾಗ್ರತವಾಗಿರಿಸಿಕೊಂಡೇ ಮಾತನಾಡುವ ದನಿ ಕೇಳುತ್ತದೆ. ಸ್ವಲ್ಪ ಹೆಚ್ಚು ಕಡಿಮೆ ಯಾವ ಕವನವನ್ನು ಓದಿದರೂ ವೃಕ್ಷದಲ್ಲಿ ಜೀವರಸ ಹರಿಯುತ್ತಿರುವಂತೆ ಇಡೀ ಕವನದಲ್ಲಿ ಈ ಅರಿವು ಹರಿಯುತ್ತಿರುತ್ತದೆ. ಈ ಕಾಲ–ಆಕಾಶಗಳ ಅರಿವಿನೊಂದಿಗೆ ಸೃಷ್ಟಿಯ ಭಾಗವಾಗಿ ತನ್ನನ್ನು ಕಂಡುಕೊಳ್ಳುವ ಚೇತನದ ಮಾತು ಇಲ್ಲಿಕೇಳುತ್ತದೆ. ಈ ಜೀವಕ್ಕೆ ನೆಲ-ಮುಗಿಲುಗಳೆರಡರ ನಂಟೂ ಉಂಟು, ಕಾವ್ಯಸೃಷ್ಟಿಯ ಕ್ರಿಯೆಯನ್ನು ಕುರಿತ ಒಂದು ಸೊಗಸಾದ ಕವನ ಪ್ರಾರಂಭವಾಗುವುದೇ ಹೀಗೆ :

ಬಣ್ಣದ ಕೊಕ್ಕಿನ ಬಾನಾಡಿ ಹಕ್ಕಿಗೆ
ಮಣ್ಣಿಗಿಳಿಯುವ ತನಕ ಬಾಳೆ ಇಲ್ಲ
ಬಳ್ಳಿ, ಗಿಡ, ಮರ ಎಲ್ಲ ಬೀಜದಲೆ ಇದ್ದರೂ
ನೆಲದೊಡಲ ಕೃಪೆಯಿರದೆ ಸುಳ್ಳೆ ಎಲ್ಲ

ಈ ಪ್ರಕ್ರಿಯೆಯಲ್ಲಿ ಸಮಸ್ತ ಸೃಷ್ಟಿಯೂ ಭಾಗಿಯಾಗುತ್ತದೆ.

ಹಾಡು ಕೇಳುವ ಹೊತ್ತು ಕಾಡು ಬೆಳೆಯುವ ಹೊತ್ತು
ಗುಡ್ಡ, ನದಿ ಮಾತಾಡಿ ನಗುವ ಹೊತ್ತು
ನಕ್ಷತ್ರಗಳು ಧಿಕ್ಕಿಯಾಗಿ ಚಿತ್ರಸ್ಫೋಟ
ಬದುಕ ಬೆಳೆಸುವುದು, ನನಗಷ್ಟೆ ಗೊತ್ತು.

ಕವಿಯ ವಿನ್ಯಾಸಪ್ರಜ್ಞೆ 'ದಾಟಿತಾಗಲಿ ದೃಷ್ಟಿ ಕಡೆಯ ಪರಿಧಿ' ಎನ್ನುವ ಕವನವನ್ನು ರೂಪಿಸುತ್ತದೆ. ಸಮಷ್ಟಿಯ ಭಾಗವಾಗಿಯೇ ಪಡೆಯಬೇಕಾದ ಸಾರ್ಥಕ್ಯವನ್ನು ಮನುಷ್ಯ ತನ್ನ self-consciousness ನಿಂದಲೇ ಕಳೆದುಕೊಂಡನೋ, ಅವನ ಚಿತ್ತವೇ ಅವನನ್ನು ಸೃಷ್ಟಿಯ ಇತರ ಭಾಗದಿಂದ ದೂರ ಮಾಡಿತೋ ಎಂಬ ಶಂಕೆ ಒಂದು ಕವನದಲ್ಲಿ ವ್ಯಕ್ತವಾಗುತ್ತದೆ.

ಮೂಲಪ್ರಜ್ಞೆಯ ಬಿಂಬ
ಕೋಟಿ ಚೂರುಗಳಾಗಿ
ಹಿರಿಕಡಲು ಹನಿಹನಿಗಳಾಗಿ ಒಡೆದ ವಿಕಾರ
ಗುರುತಿಸಿದರೂ ನಿಜವ ರುಚಿಯಲ್ಲಿ, ಹನಿಗೆಲ್ಲಿ
ಹಡಗುಗಳ ತೇಲಿಸುವ ಅಧಿಕಾರ ?

ಸಂಕಲನಕ್ಕೆ ಹೆಸರು ಕೊಟ್ಟಿರುವ 'ಹೊಳೆ ಸಾಲಿನ ಮರ' ಒಂದು ಮುಖ್ಯವಾದ ಕವನ : ಬಾಳಿನ ಔದಾರ್ಯವನ್ನೂ ಸಫಲತೆಯನ್ನೂ ಮರ ಮತ್ತು ಅದರ ಆವರಣದ ಚಿತ್ರ ಹಿಡಿದಿಡುತ್ತವೆ. ಮರ ನೀರಿನ ಯೋಚನೆ ಇಲ್ಲದೆ ನೆಲದಲ್ಲಿ ಬೇರನ್ನು ಇಳಿಸುತ್ತದೆ. ಸುತ್ತಲಿನ ಆವರಣ ಅದಕ್ಕೆ ನೀರನ್ನೂ, ಸೊಗಸನ್ನೂ ಒದಗಿಸುತ್ತದೆ. 'ನಾನಲ್ಲ ಇದಕ್ಕೆ ಯೋಗ್ಯ' ಎಂದು ಭಾವಿಸುವ ಮರ ಹಕ್ಕಿಗಳಿಗೆ ಆಶ್ರಯ, ಆದರೆ ಆಶ್ರಯವೆಂಬ ಭಾವನೆ ಅದಕ್ಕೆ ಇಲ್ಲ. ಹಕ್ಕಿದನಿ, ಹೊರಗಿನ ಗಾಳಿ ಎಲ್ಲದರಿಂದ ಅದರಲ್ಲಿ ಮೋದ ಉಕ್ಕಿ ಹರಿದು ಘುರಕ್ಕೆ ಮರವೇ ತುಳುಕುವ ಕಿನ್ನರಿಯಾಗುತ್ತದೆ.

ಇಡೀ ಕವನ, ಉಸಿರಾಡುವಷ್ಟು ಸಹಜವಾಗಿ ತನ್ನನ್ನು ಇತರರಿಗೆ ಕೊಟ್ಟುಕೊಳ್ಳುವ ಔದಾರ್ಯ ನಿರ್ಮಿಸುವ ಬಾಳಿನ 'ರಿಯಲೈ-ಸೇಷನ್' ಆಗುತ್ತದೆ. ಈ ಔದಾರ್ಯ ಚಿಮ್ಮಿಸುವ ಧನ್ಯತಾ ಭಾವವೇ ರೂಪತಾಳುತ್ತದೆ. ಸೂರ್ಯ, ಚಂದ್ರ, ತಾರೆ, ಮರ ಎಲ್ಲ – ಜೀವದಾಯಕವಾದ – ನೀರಿನಲ್ಲಿ, ಬೆಳಕಿನಲ್ಲಿ ಸಮ್ಮಿಳನ ವಾಗುವ ಚಿತ್ರವನ್ನು ಇಲ್ಲಿ ಗಮನಿಸಬೇಕು; ಅತ್ಯಂತ ಸಹಜವಾದ ವಿವರಗಳಿಂದ ನಿರ್ಮಾಣಗೊಳ್ಳುವ ಪ್ರತೀಕವನ್ನು ಪರಿ ಭಾವಿಸಬೇಕು.

ಒಂಟಿತನ, ತನ್ನತನದ ('ಐಡೆಂಟಿಟಿ'ಯ) ಅನ್ವೇಷಣೆ ಇವೇ ಬಹುಮಟ್ಟಿಗೆ ಪ್ರೇರಿಸಿದ ನವ್ಯಕಾವ್ಯವನ್ನು ದಾಟಿ ಬಂದ ಕಾವ್ಯ ಇದು. ವಿಶ್ಲೇಷಣೆ ವ್ಯಂಗ್ಯಗಳನ್ನು ಆಧರಿಸಿದ ನವ್ಯ ಕಾವ್ಯವನ್ನು ದಾಟಿ ಬಂದದ್ದು; ಆದರೆ ನವೋದಯದ 'ಲಿರಿಸಿಸಂ'ಗೆ ಸಂಪೂರ್ಣವಾಗಿ ಹಿಂದಿರುಗಿದ್ದಲ್ಲ.

ಆಹ !

ಹಾಡುವ ಹಕ್ಕಿಯೆ, ಮೋಡವೆ, ಓಡುವ ಮರಿತೊರೆಯೇ
ಕಾಡುವ ಹೆಣ್ಣೇ, ಪರಿಮಳ ತೀಡುವ ಮಲ್ಲಿಗೆಯೇ
ಎಳೆಯುವ ಸೆಳವೇ, ಜೀವವ ಸುಲಿಯುವ ಸವಿ ನೋವೇ

ಇದರಲ್ಲಿ 'ಲಿರಿಸಿಸಂ'ಇದೆ, ಆದರೆ ತಗ್ಗಿದ (subdued) ಲಿರಿಸಿಸಂ. ಈ ಕವನಗಳ ಛಂದಸ್ಸು, ಸ್ವಗತದ ವಿಧಾನ, ಆಡು ಭಾಷೆಯ ಲಯವನ್ನು ಬಳಸುತ್ತ, ಆಡುಭಾಷೆಗೆ ಹತ್ತಿರವಾದ ಭಾಷೆ ಎಲ್ಲ ನವ್ಯದ ಪ್ರಾಂತ್ಯವನ್ನು ಕ್ರಮಿಸಿ ಬಂದವು. ಲಕ್ಷ್ಮೀ ನಾರಾಯಣ ಭಟ್ಟರು ನವೋದಯ ನವ್ಯ ಪರಂಪರೆಗಳನ್ನು ಹಾದು ತಮ್ಮದನಿಯನ್ನು ಉಳಿಸಿಕೊಂಡವರು, ಬಾಳನ್ನು ಚಿಂತನ ಶೀಲರಾಗಿ ಸ್ವೀಕರಿಸಿದವರು, ಒಂದು ವಿಶಾಲ ಸಮಗ್ರದ ಅರ್ಥ ವತ್ತಾದ ಭಾಗವಾಗಿ ವ್ಯಕ್ತಿಜೀವನವನ್ನು ಪರಿಭಾವಿಸಿದವರು. ಯಾತ್ರೆಯಂತೆಯೇ ಅವರಲ್ಲಿ ಮತ್ತೆ ಮತ್ತೆ ಕಾಣುವ ಪ್ರತಿಮೆ

ಯೆಂದರೆ ಕಾಳಿನಿಂದ ಎದ್ದು ಬರುವ ಮರ. 'ನನ್ನ ನೆನಪಿನ ಯಾತ್ರೆ'ಯ ಪ್ರತಿಮೆಗಳೆಲ್ಲ ಕಾಠಿಣ್ಯವನ್ನು, ಗಡಸನ್ನು, ಹರಿತ ವನ್ನು ಸೂಚಿಸುವವೇ. ಅವು ಸೃಷ್ಟಿಸುವ ಜಗತ್ತು ಕ್ರೌರ್ಯ ಕಾಠಿಣ್ಯಗಳ ಜಗತ್ತು. ಈ ಜಗತ್ತಿನಲ್ಲಿ ಸೃಜನ ಕಾರ್ಯವುಂಟು, ಫಲ ಬಿಡುವುದುಂಟು. ಈ ಸೃಜನ ಕಾರ್ಯದಲ್ಲೂ ಕಾಠಿಣ್ಯ ಹೋರಾಟ ಅಡಗಿವೆ. ಇಲ್ಲಿ ಮರ ಕಾಳಿನಿಂದ ಏಳುವುದೂ 'ಹಡೆವ ಬಲ ಕೊಡುವ ಛಲ ಜೊತೆಗೂಡಿ' ಎತ್ತಿರುವುದರಿಂದ. ಆದರೆ ಕಾಳಿನಿಂದ ಮರ ಏಳುತ್ತದೆ, ಬಲ–ಛಲಗಳು ಮರವನ್ನು ರೂಪಿಸುತ್ತವೆ. (ಇಡೀ ಪ್ರತಿಮೆಯೇ ನನಗೆ ಸಂಕೀರ್ಣವಾಗಿ ಅನುಭವವಾಗುತ್ತದೆ. ಕಾಳಿನಿಂದ ಮೇಲೆ ಬರುವ, ಜೀವದ ಪ್ರತೀಕವಾದ ಮರದ ಅವತಾರ ಪ್ರಕ್ರಿಯೆಗೆ ಬಲ-ಛಲಗಳು ರೂಪಿಸುವ ಶಕ್ತಿಗಳಾಗಿ ಒದಗುತ್ತವೆ.)

ಈ ಸಂಕಲನದಲ್ಲಿ ಮೂರು ಅನುವಾದಗಳಿವೆ. ಯೇಟ್ಸನ 'A prayer for my daughter' ಅನ್ನು ಕವಿ ಯಶಸ್ವಿಯಾಗಿ ಅನುವಾದಿಸಿದ್ದಾರೆ. ಗ್ರೀಕ್ ಪುರಾಣಗಳ ಮತ್ತು ಯೇಟ್ಸನ ವೈಯಕ್ತಿಕ ಜೀವನದ ಘಟನೆಗಳ ಪ್ರಸ್ತಾಪಗಳಿರುವ ಈ ಕವನ ಕನ್ನಡ ಓದುಗರಿಗೆ ಸ್ವಲ್ಪ ತೊಡ ಕಾಗಬಹುದು. ಆದರೆ ಇದರ ಶಿಲ್ಪ ಕುತೂಹಲಕಾರಿಯಾದದ್ದು. ಒಂದು 'ಕ್ರೈಸಿಸ್' ನಲ್ಲಿ ಕವಿಯ ಮನಸ್ಸು ಪ್ರಕ್ಷುಬ್ಧವಾಗಿರುವ ಸ್ಥಿತಿಯಲ್ಲಿ ಕವನ ಪ್ರಾರಂಭವಾಗುತ್ತದೆ. ಬಾಳು ಅವನಿಗೆ ಕಲಿಸಿದ ಪಾಠಗಳ ನೆನಪಾಗುತ್ತದೆ. ಕಡೆಗೆ ತನ್ನ ಮಗಳ ನೆಮ್ಮದಿ ಯನ್ನು ಅವನು ಕಾಣುವುದು 'ಸಕಲ ವಿಧಿಬದ್ಧ ಸಭ್ಯಾಚಾರ ಸಂಪನ್ನ ಗೃಹ'ದಲ್ಲಿ.

How but in custom and in ceremony
Are innocence and beauty born

ಮನಸ್ಸಿನ ಬಿರುಗಾಳಿ ಕಡೆಗೆ ಸಮಾಧಾನವನ್ನು ಕಂಡುಕೊಳ್ಳು ವುದು ಲಕ್ಷ್ಮೀನಾರಾಯಣಭಟ್ಟರ ಕವನಗಳ ನಡಿಗೆಯೂ ಹೌದು.

ಇಲ್ಲಿ ಅನುವಾದಿತವಾಗಿರುವ ಮತ್ತೊಂದು ಕವನ ಟಿ.ಎಸ್. ಎಲಿಯಟ್‌ನ A Game of Chess (The Wasteland ಕವನದ ಎರಡನೆಯ ಭಾಗ). ಕನ್ನಡ ಶೀರ್ಷಿಕೆ 'ಚದುರಂಗದಾಟ.' ಇದು ಅನುವಾದಕನಿಗೆ ಸವಾಲಾಗುವ ಕವನ. ಇಲ್ಲಿ ಭಾಷೆಯ ಅಂತಸ್ತುಗಳು, ಸಾಮಾನ್ಯ ಸಂಭಾಷಣೆಯಂತೆ ಕಾಣುವ ರಚನೆಯ ಹಿಂದಿರುವ ಬಿಗಿ, ಸಂಪೂರ್ಣವಾಗಿ ಅರ್ಥ ವಾಗಬೇಕಾದರೆ ಪರಿಚಿತವಾಗಿರಬೇಕಾದ ಹಿನ್ನಲೆಯ ಭಾಗಗಳು (ಉದಾಹರಣೆಗೆ, ಪ್ರಾರಂಭವೇ ಷೇಕ್ಸ್‌ಪಿಯರನ 'ಆ್ಯಂಟನಿ ಅಂಡ್ ಕ್ಲಿಯೋಪಾತ್ರ' ನಾಟಕದ ಒಂದು ಪ್ರಸಿದ್ಧಭಾಗದ ಹಿನ್ನಲೆಯಲ್ಲಿ ಓದಬೇಕಾದದ್ದು ; ಅವನದೇ 'ದಿ ಟೆಂಪೆಸ್ಟ್' ನಾಟಕ, ಮಿಲ್ಟನ್, ಮಿಡ್ಲ್‌ಟನ್, ವೆಬ್‌ಸ್ಟರ್ ಎಲ್ಲರ ಕೃತಿ ಗಳು ಅಲ್ಲಲ್ಲಿ ಧ್ವನಿತವಾಗುತ್ತವೆ), ಸಂಭಾಷಣೆಯ ಆವರಣ ಇವೆಲ್ಲ ಅನುವಾದದಲ್ಲಿ ತೊಡಕಾಗುತ್ತವೆ. ಹೀಗಿದ್ದೂ ಲಕ್ಷ್ಮೀ ನಾರಾಯಣ ಭಟ್ಟರ ಅನುವಾದವು ಅನುವಾದ ಎಂದು ಅನ್ನಿಸದೆ ಮೂಲದ ಒಟ್ಟು ಅನುಭವವನ್ನು ಹಿಡಿದುಕೊಡುವುದರಲ್ಲಿ ಯಶಸ್ವಿಯಾಗಿದೆ. ಈ ಕವನದಲ್ಲಿ 'ಇನ್‌ವರ್ಟೆಡ್ ಕಾಮ' ಗಳ ಬಳಕೆ ಮುಖ್ಯ ; ಅನುವಾದ ಅಚ್ಚಾಗುವುದರಲ್ಲಿ ಒಂದೆರಡು ಕಡೆ ಇದು ಸ್ವಲ್ಪ ತಪ್ಪಿದಂತೆ ಕಾಣುತ್ತದೆ. 'ಆಗಲೂ ಗೋಳಿಟ್ಟ ಳಾಕೆ, ಚೆನ್ನಟ್ಟಿತು ಲೋಕ ಇನ್ನೂ' ಎನ್ನುವ ಪಂಕ್ತಿಯ ಮೂಲದಲ್ಲಿ ಮೊದಲ ಭಾಗದಲ್ಲಿ ಭೂತಕಾಲ, ಎರಡನೆಯ ಭಾಗ ದಲ್ಲಿ ವರ್ತಮಾನಕಾಲ ಬಳಕೆಯಾಗಿವೆ, ಈ ಬಳಕೆ ಅರ್ಥವತ್ತಾ ಗಿಯೂ ಇದೆ. 'My nerves are bad tonight' ಗೆ ಯಾಕೋ ಬೆಚ್ಚಗಿದೆ ಸಮೀಪವಾಗುತ್ತದೆ. ಆದರೆ ಇವೆಲ್ಲ ಕೆಲವು ವಿವರಗಳ ಮಾತು. ಶಿಷ್ಟ, ಔಪಚಾರಿಕ (ಫಾರ್ಮಲ್

ಭಾಷೆ, ಸಂಭಾಷಣೆಯ (ಕಲೊಕ್ವಿಯಲ್) ಭಾಷೆ, ಅಲ್ಲಲ್ಲಿ 'ಸ್ಲ್ಯಾಂಗ್' ಬೆರೆತ, ನಡಿಗೆಯನ್ನೆ ಬದಲಿಸುವ, ಗಂಡುಹೆಣ್ಣಿನ ಸಂಬಂಧವನ್ನು ಹಲವು ಪ್ರಸ್ತಾಪ ಮತ್ತು ಮಾತುಗಳ ಮೂಲಕ ಸೂಚಿಸುತ್ತ ಸಾಗುವ ಕವನದ ಸಮಗ್ರ ಕನ್ನಡರೂಪ ಓದಿದಾಗ ಇದೊಂದು ಒಳ್ಳೆಯ ಸಾಧನೆಯೇ ಎನ್ನಿಸುತ್ತದೆ,

'ವೃತ್ತ', 'ಸುಳಿ' ಗಳಿಂದ ಕಾವ್ಯ ಸೃಷ್ಟಿಯನ್ನು ಪ್ರಾರಂಭಿಸಿದ ಈ ಮಿತ್ರರು ಸುಮಾರು ಹದಿನೇಳು ವರ್ಷಗಳಲ್ಲಿ ಬಹು ದೂರ ಬಂದಿದ್ದಾರೆ. 'ಇದಲ್ಲ ತಕ್ಕ ಗಳಿಗೆ' ಯಂತಹ ಕವನ ರಚಿಸಬೇಕಾದರೆ ಮನಸ್ಸೂ ಭಾಷೆಯೂ ಪಕ್ವವಾಗಬೇಕು. ಈ ಕವನದ ಭಾವವಷ್ಟನ್ನೆ ಕುರಿತು ಈ ಮಾತನ್ನು ಹೇಳುತ್ತಿಲ್ಲ. ಇದರಲ್ಲಿರುವ ಗಾಢವಾದ ಭಾವ, ಅದು ಹೀಗೆ ಹೆಪ್ಪುಗಟ್ಟಬೇಕಾದರೆ ಇದರ ಹಿಂದಿರುವ ಜೀವನಾನುಭವ, ತೀವ್ರವಾದ ಸಂವೇದನೆಯನ್ನು ಅಭಿವ್ಯಕ್ತಿಗೊಳಿಸುವಾಗ ಇರುವ ಜೀವನ ಪ್ರೀತಿ–ಸಂಯಮಗಳ ಸಂಗಮ ಇವೆಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡು ಹೇಳುತ್ತಿದ್ದೇನೆ. ನಿರುದ್ವಿಗ್ನವೆನಿಸಿದರೂ ಗಾಢವಾಗಿ ಅನುಭವಿಸಿ ಹೇಳುವ ಕಾಳಜಿಯ ಹಣ್ಣಾದ ಮನಸ್ಸು ಇಲ್ಲಿ ಇದೆ. ಆಪ್ತವಾದುದನ್ನು ಹೇಳುವಾಗಲೂ ನಿಯಂತ್ರಣವಿದೆ. ಡಾ. ಲಕ್ಷ್ಮೀನಾರಾಯಣ ಭಟ್ಟರ ಕಾವ್ಯ ಈಗಾಗಲೆ ಓದುಗರಿಗೆ ಶ್ರೀಮಂತವಾದ ಪ್ರತಿಫಲ ಕೊಡುತ್ತಿರುವಂಥದು. ಅದು ಇನ್ನೂ ಬೆಳೆಯಲಿ, ಅವರಿಗೆ ಶುಭವಾಗಲಿ ಎಂದು ಹಾರೈಸುತ್ತೇನೆ,

ಜ್ಯೋತಿ, 267, 9ಎ ಮುಖ್ಯರಸ್ತೆ ಎಲ್. ಎಸ್. ಶೇಷಗಿರಿರಾವ್.
ಮೂರನೆಯ ಬ್ಲಾಕ್, ಜಯನಗರ
ಬೆಂಗಳೂರು–560011.

# ಅರ್ಪಣೆ

ಹಿರಿಯರಾದ

**ಡಾ. ಹಾ. ಮಾ. ನಾಯಕ**

ಅವರಿಗೆ

# ಕೃತಜ್ಞತೆ

ನನ್ನ ಈ ಕವನಸಂಕಲನಕ್ಕೆ ಬೆಲೆಯುಳ್ಳ ಮುನ್ನುಡಿ ಬರೆದು ಕೊಟ್ಟ ಹಿರಿಯರಾದ ಪ್ರೊ. ಎಲ್. ಎಸ್. ಶೇಷಗಿರಿ ರಾವ್ ಅವರಿಗೆ

ಇಲ್ಲಿನ ಕವನಗಳನ್ನು ಪ್ರಕಟಿಸಿದ ಉದಯವಾಣಿ, ತರಂಗ, ಪ್ರಜಾವಾಣಿ, ತುಷಾರ, ಮಲ್ಲಿಗೆ, ಮಂಗಳ, ಮೊದಲಾದ ಪತ್ರಿಕೆಗಳಿಗೆ

ಈ ಕವನಗಳನ್ನು ಓದಿ ತಮ್ಮ ಮೆಚ್ಚಿಕೆ ವ್ಯಕ್ತಪಡಿಸಿದ ಚಂದ್ರಶೇಖರ ಕಂಬಾರ, ಸುಮತೀಂದ್ರನಾಡಿಗ, ಲಕ್ಷ್ಮಣರಾವ್, ವೆಂಕಟೇಶಮೂರ್ತಿ, ನರಹಳ್ಳಿಬಾಲು, ವ್ಯಾಸರಾವ್ ಮೊದಲಾದವರಿಗೆ

ಸುಂದರವಾದ ರಕ್ಷಾಪತ್ರ ಬರೆದು ಕೊಟ್ಟ ವೆಂಕಟೇಶ ಮೂರ್ತಿ ಮತ್ತು ಎಂ. ಎಸ್. ಎಸ್. ಮೂರ್ತಿ ಅವರಿಗೆ

ಈ ಸಂಕಲನವನ್ನು ಪ್ರಕಟಿಸುತ್ತಿರುವ ಕ್ಷಮಾ ಪ್ರಕಾಶನದವರಿಗೆ ಮತ್ತು ಇದನ್ನು ಉತ್ತಮರೀತಿಯಲ್ಲಿ ಮುದ್ರಿಸಿಕೊಟ್ಟ ರೋಹಿಣಿ ಪ್ರಿಂಟರ್ಸ್ ಮಾಲೀಕರಿಗೆ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

# ಪರಿವಿಡಿ

# ಶಿವಮೊಗ್ಗೆಯಲ್ಲಿ ಮಳೆ–1946

ಹತ್ತು ದಿನದಿಂದ ಊರಲ್ಲಿ
ರಚ್ಚೆಹಿಟ್ಟು ರಾಚುತ್ತಿದೆ ಮಳೆ
ಒಡೆದಂತೆ ನೆಲಕ್ಕೆ ಏಕಕಾಲಕ್ಕೆ ಸಹಸ್ರ ಮೊಳೆ
ಊರಿನ ಕೆನ್ನೆಗೆ ಪಟಪಟ
ಬಾರಿಸಿ ಬೈಯುತ ವಟವಟ
ಕೂಗಿ ಬರಿಸುತ್ತಿದೆ ಎಲ್ಲರೆದೆಯಲ್ಲಿ ದಿಗಿಲು
ತಿಂಗಳ ಹಿಂದೆ ಮಾತಾಡಲೂ ಬರದೆ ಉಗ್ಗುತ್ತಿದ್ದ ಮುಗಿಲು

ಕುಂಬಾರ ಗುಂಡಿಯ ಸಣ್ಣ ಹೊಂಡಗಳೆಲ್ಲ
ಸಾರಿನ ದೊನ್ನೆ, ಕೆಂಪನೆ ಸೊನ್ನೆ
ಪ್ರಿಯನ ಮೊದಲ ಮುತ್ತಿಗೆ ನಾಚಿದ ಕನ್ನೆಯ ಕೆನ್ನೆ.
ಒಮ್ಮೊಮ್ಮೆ ಕದಡಾರತಿಯ ಜಲ
ರಜಸ್ವಲೆಯ ಕೆದರಿದ ದಳ
ಮಳೆ ನಿಂತಿತೊ ಮಣ್ಣ ಬಿಲಕ್ಕೆ ಬೆಣ್ಣೆ ತಳ

ಮಳೆ ಹೊಡೆತಕ್ಕೆ ಕಂಗಾಲು
ಮುಚ್ಚಿದೆ ಮನೆ ಮನೆ ಬಾಗಿಲು
ಸಿಳ್ಳು ಹಾಕುತ್ತ ಓಣಿಗಳಲ್ಲಿ
ಪುಂಡಗಾಳಿಯ ಇರಿಚಲು ಕಾವಲು
ತೆರೆದಿದ್ದರೆ ಕಿಟಕಿ, ಒಳಕ್ಕೆ ಕೊಂಚ ಹಣಿಕಿ
ಪೋಲಿಕೂಗುವ ತೆವಲು ಪಡ್ಡೆಗಾಳಿಗೆ
ಕನಸುತ್ತದೆ ಗೂಳಿಮನಸ್ಸು ಕಾಮದ ಹೋಳಿಗೆ

ನುಗ್ಗಿದೆ ದೊಡ್ಡಬ್ರಾಹ್ಮಣರ ಬೀದಿಗೂ ನೀರು
ಹೊಳೆ ಚರಂಡಿ ಒಂದಾಗಿ
ಗುಂಡಾಭಟ್ಟರ ಮಡಿ ಬಂದಾಗಿ
ಪೂಜೆ ಸ್ನಾನಕ್ಕೆ ರಜ
ಸಂಧ್ಯಾವಂದನೆ ವಜ
ಕಾಫಿ ನೀರಿಗೇ ಆಗಿ ತತ್ವಾರ
ಭಟ್ಟರ ಮಡಿಯ ವ್ಯಾಖ್ಯಾನ ವಿಸ್ತಾರ
ಹಿಂದೆ ತಿವಿಸಿಕೊಂಡಿದ್ದ ನಲ್ಲಿ ಮುಖಕ್ಕೆ ಈಗ
ಕುಂಕುಮ ಹೂವು ಇಟ್ಟು ಸತ್ಕಾರ!

ತುಂಗೆಗೆ ಗಂಗೆಯಾಗುವ ಮನ
ಭಾಗೀರಥೀ ಹಬ್ಬದ ದಿನ
ಹೊಳೆ ಮೆಟ್ಟಿಲಲ್ಲಿ
ರಾಮಣ್ಣ ಶೆಟ್ಟಿ ಪಾರ್ಕಿನ ಇಳಿ ಘಟ್ಟದಲ್ಲಿ
ನೂಕು ನುಗ್ಗಲು ಜನ
ತುಂಗೆಯ ಸರ್ಕಸ್ಸು ಊರೆದುರಿಗೆ
ಪ್ರಶಾಂತಲಯದ ಬ್ಯಾಂಡು ನಡಿಗೆ, ಈ ಗಳಿಗೆ
ಹೆಡಿಗೆ ಮುಚ್ಚಳ ಸರಿಸಿ ಸರಸರನೆ ನೆಲಕ್ಕೆ ಹರಿವ
ಸರ್ಪಗತಿ ತೆರೆಗೆ
ಮರುಗಳಿಗೆ.
ಹೆಡೆಯೆತ್ತಿ ರಪ್ಪನೆ ಬಡಿದು ದಡಕ್ಕೆ
ಸರಿ ದೂರ ಎನ್ನುವ ರೋಷ
ನಿಮಿಷಕ್ಕೊಂದು ಮೆಟ್ಟಲು ಮುಳುಗು
ಜಲಕ್ಕೆ ನೆಲ ನುಂಗುವ ಆವೇಶ

ಇಂಥ ನೆರೆಯಲ್ಲೂ ಮೊರೆವ ಹರಿವಲ್ಲೂ
ಜಾರಿ ತೂರಿ ಹೋರಾಡಿ ಬರುವ ಉಕ್ಕಡ ಬುಗುರಿ

ಜೀವದ ಜೊತೆ ಅಂಬಿಗರ ಹುಚ್ಚಾಟ
ತೇಲುವ ಕಳ್ಳನಾಟಾ ಹಿಡಿಯಲು
ಹೊಳೆಗಿಳಿದಾನೆಗಳ ಮೋಜಿನ ನೀರಾಟ
ಆಡುವ ಆನೆ ಒಮ್ಮೊಮ್ಮೆ ಗಾಢ ನಿಶ್ಚಲ
ಮುಳುಗದ ಬೆನ್ನು ತಲೆ, ಮೇಲೆ ಕೂಗುವ ಕಾಗೆ
ಆನೆಯೊ ಬಂಡೆಯೊ ? ಬೆರಗಿನ ದೃಶ್ಯ
ಆನೆಬಂಡೆ ಕಾಗೆಬಂಡೆ ಪದಕ್ಕೆ
ಹೊಸ ಅರ್ಥಸ್ಪರ್ಶ !

ಎಸೆಯುತ್ತಾರೆ ಜನ ಕೈಮುಗಿದು ತಾಯೊಡಲಿಗೆ
ಹೂವು, ಅಕ್ಷತೆ ಕಾಸು, ಹಚ್ಚಿಡುತ್ತಾರೆ ಧೂಪ.
ತೇಲಿಬಿಡುತ್ತಾರೆ ಹೆಂಗಳೆಯರು ನಮಿಸಿ
ನೂರಾರು ದೊನ್ನೆ ದೀಪ
ಹಾಡುವ ನೀರಲ್ಲಾಡುವ ಬೆಂಕಿಯ ಪುಟಾಣಿ ಪಾಪ !
ಕಾಡುವ ಬೆರಗು
ದೂರ ಕಡಲಲ್ಲಿ ಯುದ್ಧಕ್ಕೆ ಹೊರಟಿದೆ
ಪಂಜು ಬೆಳಕಿನ ಸಾಲುಹಡಗು

ಸಂಜೆ ರಸ್ತೆಯ ತುಂಬ
ಅರಳಿದ ಛತ್ರಿಗಳ ವಾಕಿಂಗು
ಕೆಸರು ರಸ್ತೆಯಲ್ಲಿ ಎಂಕ ಸೀನರಿಗೆ ಸ್ಕೇಟಿಂಗು !
ಚಿಕ್ಕೆ ಬೆಳಕಿಲ್ಲದೆ ಕಕ್ಕಾಬಿಕ್ಕಿ ರಾತ್ರಿ
ಊಟದ ಹೊತ್ತಿಗೆ ಕರೆಂಟು ಹೋಗುವುದು ಖಾತ್ರಿ.
ಬುಡ್ಡಿ ಬೆಳಕಿನಲ್ಲಿ ಬೆಚ್ಚನೆ ಊಟ
ಎಲ್ಲಿಲ್ಲದ ಸ್ನೇಹ ಹಬೆ ಅನ್ನಕ್ಕೆ ಹಾಗಲ ಗೊಜ್ಜಿಗೆ
ಇದ್ದರೆ ಒಂದೆರಡು ಮೆಣಸಿನ ಬಜ್ಜಿಗೆ

ಶಿವಮೊಗ್ಗೆಯಲ್ಲಿ ಮಳೆ–1946

ನಲಿಯುತ್ತದೆ ಕಿವಿ
ಹಪ್ಪಳ ಬಾಳಕ ಮುರಿಯುವ ಸದ್ದಿಗೆ

ಆಹಾ !
ಎಲ್ಲಪ್ಪಾ ಸುರಿದೀತು ಇನ್ನೊಮ್ಮೆ ಅಂಥ ಮಳೆ
ಆಹಾ !
ಎಲ್ಲಪ್ಪಾ ಹರಿದೀತು ಇನ್ನೊಮ್ಮೆ ಅಂಥ ಹೊಳೆ

# ನವವಸಂತ

ದಾವಾನಲ ಧಾರಿಣಿ ಜಲ ಆಗಸ ಅನಿಲದಲಿ
ಮಾಯದ ಗಾಯದ ಮಣ್ಣಿನ ಕಾಯದ ಹಂಗಿನಲಿ
ಸಾರದ ಸೇರದ ಎಂದೂ ಆರದ ಘನತರಣಿ
ಇರುಳಾಳುವ ಮನದಾಳಕೆ ಸುರಿ ಕಿರಣವ ಕರುಣಿ

ಎದೆಯಾಳದಿ ಎವೆತೆರೆದಿವೆ ಗತಭವಗಳು ಹೊರಳಿ
ಎಂದಿನ ಸ್ಮರಣೆಯ ಅರಣಿಯೊ ಹೊಗೆಯಾಡಿದೆ ನರಳಿ
ಮೇಲೇಳುವ ಬಿಳಿಧೂಮದ ಜಾಲದ ಬಂಧದಲಿ
ಎಡವಿದೆ ಮತಿ ವಾದದ ಗತಿ ಸುಳಿ ಬಿಚ್ಚಿದೆ ಕದಳಿ

ಗಿರಿ ಹುತ್ತದ ತುದಿಗೆತ್ತಿದೆ ದಿಙ್ನಾಗರ ಭೋಗ
ಸೆಳೆಯುತ್ತಿಗೆ ಅಳೆಯುತ್ತಿದೆ ಅನುರಾಗದ ಆಳ
ಕರೆಯುತ್ತಿದೆ ಬಾರೇ ಬಾ ನೀರೇ ನಿಧಿ ಸಾರೇ
ಇಡಿ ಚಿತ್ತದ ಮಧುಭಾಂಡದಿ ಏನೇನಿದೆ ತಾರೇ

ಗಣಿಯಾಳದ ಜಲ ಮೇಲಕೆ ಜುಳು ಜುಳು ಜುಳು ಹರಿದು
ಯೋಗದ ಕಡಲಿಗೆ ಎಚ್ಚರ ನಿದ್ದೆಯ ತೊರೆ ಹರಿದು
ಸಾಗುವ ಡೊಂಕಿನಲಾಗಲಿ ತೂಗಾಟದ ರಾಗ
ಹಾಲಿಸ ಹರವಿಯ ಸಿಡಿಸುವ ಬೃಂದಾವನ ಭೋಗ

ಹೊಳೆ ಸಾಲಿನ ಮರದ
ರೀತಿ ರಿವಾಜೇ ಬೇರೆ
ಮೈ ತುಂಬ ಎಲೆ ಟಿಸಿಲು ಎದ್ದು
ಎಳೆ ಬಿಸಿಲಿನ ಬೆಚ್ಚನೆ ಶಾಲು ಹೊದ್ದು
ಎಲೆ ಎಲೆಯೂ ಹಕ್ಕಿ ದನಿ ಚಿಮ್ಮಿ
ಏನೋ ಮೋದ ನರನರದಲ್ಲೂ ಹೊಮ್ಮಿ
ಹೊಳೆ ಮೇಲಿನ ಗಾಳಿ ಒಳಗೆಲ್ಲ ನುಗ್ಗಾಡಿ
ಮರಕ್ಕೆ ಮರವೇ ತಾರಶ್ರುತಿಗೆ ಹಾಡಿ
ಆಗುತ್ತದೆ ಹಾಡು ತುಳುಕುವ ಕಿನ್ನರಿ
ನೋಡಲು ಒಮ್ಮೆ ಹೊಳೆದಂಡೆಗೆ ಬನ್ನಿರಿ.

# ನನ್ನ ನೆನಪಿನ ಯಾತ್ರೆ

ನನ್ನ ನೆನಪಿನ ಯಾತ್ರೆ ನಿನ್ನದರ ಥರವಲ್ಲ
ಅದಕಿಲ್ಲ ಸರಳಗತಿ ದಾರಿನೆರಳು;
ಮೊಸಳೆ ಹಲ್ಲಿನ ಕಲ್ಲುದಾರಿ, ಕನ್ನಡಿ ಚೂರು
ಮಂಡೆ ಮೇಲೇ ಬಾಯಿ ಮಸೆವ ಬಿಸಿಲು

ಮಡಿದ ನಿನ್ನೆಗಳೆಲ್ಲ ಒಡೆದ ದೊನ್ನೆಗಳಲ್ಲಿ
ಸುರಿದ ಮರುಧರೆಯ ಅಮೂಲ್ಯ ನೀರು;
ಕೊಲ್ಲಲೆಳಸುವ ನೂರು ಹೊಂಚುಗಳ ಹೆಡೆಕಡಿದು
ಸಾಗಿರುವೆ ನಾನಲ್ಲ ಯುದ್ಧಭೀರು

ಸಮೃದ್ಧ ಬೆಳೆದ ಹೊಲ ಕೊಯಿಲಾಗಿ ಬರಿಬಯಲು
ಕಣ್ಣು ಚುಚ್ಚುವ ಮೂಳೆ ಕೂಳೆಗದ್ದೆ;
ಅವಶೇಷಗಳು ಇಡಿದ ಗತವೈಭವದ ಮೇಲೆ
ಹಿಂದು ಮುಂದಿಲ್ಲದ ಭಿಕಾರಿ ಎದ್ದೆ.

ಕತ್ತಲಲಿ ಬಚ್ಚಿಟ್ಟು ಗುಟ್ಟು ತೆರೆಸುವ ಮಣ್ಣು
ನೀರು ಗೊಬ್ಬರ ಇರದ ಬಂಜೆ ಭೂಮಿ;
ತುಳಿವ ಕಾಲಿನ ಕೆಳಗೆ ಅಳಿಯಲೊಲ್ಲದ ಛಲದ
ಫಲದ ಕನಸನು ಹೊತ್ತ ಜೀವಕಾಮಿ

ಕಾಲು ಹೊರಳಿದ ಕಡೆಗೆ ನಡೆದೆ, ಎರಡೂ ಬದಿಗೆ
ಭಯ ಉಗಿವ ವಕ್ರಮುಖ ಭಿತ್ತಿಚಿತ್ರ;
ನೂರು ಮೀಟರಿಗೊಮ್ಮೆ ದಾರಿ ಬದಿ ಅತ್ತಿತ್ತ
ಬಿರುಗಣ್ಣು ಬಿಟ್ಟ ಗೋಪುರದ ಹುತ್ತ.

ತಿಳಿಯದಿದ್ದರು ದಾರಿ ನಡೆದೆ ಏನೋ ತೋರಿ
ದೈವವೋ ದೆವ್ವವೋ ಬೆನ್ನದೂಡಿ;
ಕಡಲ ತಳಮನೆಗಿಳಿದು ಬೆಟ್ಟದಟ್ಟವ ಏರಿ
ತಲಪಿರುವೆ ಸಮತಟ್ಟು ನೆಲದ ದಾರಿ.

ಚಾಣ ಸುತ್ತಿಗೆ ಕೈಯ ಕೌಶಲವ ಹಾಡುತ್ತ
ಮೈಪಡೆಯದೇ ಶಿಲ್ಪ ಬಂಡೆಯಿಂದ ?
ಪಡೆವ ಬಲ ಕೊಡುವ ಛಲ ಜೊತೆಗೂಡಿ ಎತ್ತಿರಲು
ಭಾರಿ ಮರ ಏಳದೇ ಕಾಳಿನಿಂದ ?

# ದೆವ್ವಗಳ ಪಾಠ

ನಡುರಾತ್ರಿ ದೆವ್ವಗಳು ಬಾಗಿಲನ್ನು ಬಡಿದುವು
ಯಾರೋ ಎಂದು ತೆರೆದೆ
ಕಾಲಮೇಲೆ ಬಿದ್ದು ಮುಳುಮುಳನೆ ಅತ್ತವು
ಪಾಪ ! ಒಳಕ್ಕೆ ಕರೆದೆ
ದೀನ ಮುಖ ಮಾಡಿ ಕೈಹಿಡಿದು ಬೇಡಿದುವು
ಜೊತೆ ಹೋಗಲೊಪ್ಪಿದೆ

ಅವು
ಇಟ್ಟ ಬೀದಿಗಳಲ್ಲಿ ಬೀಗಿ ನಡೆದೆ
ತೆರೆದ ಹಳ್ಳಗಳನ್ನು ಕೂಗಿ ಜಿಗಿದೆ
ಕೊಟ್ಟ ತೀರ್ಥ ಕುಡಿದೆ
ಬಿಟ್ಟ ಹೆಣ್ಣನ್ನು ಮಿಡಿದೆ
ಆಕಾಶಕ್ಕೆ ಮುಖಮಾಡಿ ಸೂರ್ಯನಿಗೆ ಉಗಿದೆ
ನೆಗೆದೆ

ದೆವ್ವಗಳು ಕಲಿಸಿದ್ದೆಲ್ಲ ಒಲು ವಿಚಿತ್ರ
ನಾಲ್ಕರಲ್ಲಿ ಎಂಟು ಕಳೆಯಬಹುದು
ದಶಕದ ನೆರವಿಲ್ಲದೆ
ನೆಲಕ್ಕೆ ಹೆಜ್ಜೆ ಊರದೆ ನಡೆಯಬಹುದು
ಭಾರದ ಅರಿವಿಲ್ಲದೆ
ಬೆಟ್ಟವನ್ನೇ ಬಗೆದು
ಗಾಳಿಯನ್ನೂ ಸಿಗಿದು

ನೀರಿನಲ್ಲಿ ಮುಳುಗಬಹುದು
ಕೂದಲು ಸಹ ನೆನೆಯದೆ !

ಆದರೆ ಒಂದು ವಿಷಯ
ನೊಂದ ಜೀವಕ್ಕೆ ಮರುಗಿ
ಕಂಬನಿಯೊಂದ ಹಾಕಲು,
ತನ್ನ ಬೆವರೇ ಹರಿಸಿ
ತಿನ್ನುವ ಅನ್ನ ಬೇಯಿಸಲು,
ತರ್ಕಬಿಟ್ಟು ದೇವಾಲಯಕ್ಕೆ
ಸುತ್ತೊಂದನ್ನು ಹಾಕಲು
ಆಗುವುದೇ ಇಲ್ಲ
ಬಲು ವಿಚಿತ್ರ ಎಂದರೆ
ಒಳಗಡೆ ಮಗು ಚೀರಿತೆನ್ನಿ
ಕತ್ತು ಹಿಸುಕಿ ಕೊಂದಲ್ಲದೆ
ನಿದ್ದೆ ಬರುವುದಿಲ್ಲ !

# ನುಡಿಯಬೇಕು ಮದ್ದಲೆ

ಚೈತ್ರ ಎಷ್ಟು ಬಂದವೋ ಕದವ ಬಡಿದು ನಡೆದವೋ
ಹಕ್ಕಿಕೊರಳು ಕರೆಗಂಟೆಯು ಒತ್ತಿ ಒತ್ತಿ ದಣಿದವೋ
ತೆರೆಯು ಬರದ ಬಾಗಿಲೇ, ನೆಲ ಹಾಯದ ನೇಗಿಲೇ
ಇದ್ದರಾಯ್ತು ಬದುಕು ಬರಿದೆ? ನುಡಿಯಬೇಕು ಮದ್ದಲೆ

ಇರುವುದೇಕೆ ಕೊರಡು ಹೀಗೆ ಹೊರಚೆಲ್ಲದೆ ಬೆಂಕಿ,
ಕೂಡಿ ಕಳೆದು ಗುಣಿಸದಿರಲು ವ್ಯರ್ಥ ತಾನೆ ಅಂಕಿ ?
ಮೊಳೆಯದಿರುವ ಬಿತ್ತಕೆ, ಸುಳಿ ದಾಟದ ಚಿತ್ರಕೆ
ಅರ್ಥವುಂಟೆ ಕವಚ ಕಳೆದು ಕೂಡದಿರಲು ಸತ್ಯಕೆ ?

ಮೈಯ ತಾಗಿ ಹೋದರೇನು ಮನಸಿಗಿಳಿಯದಂಥದು ?
ಬರಿಯ ಚಿಪ್ಪು, ಒಳಗೆ ಅವಿತ ಮುತ್ತು ಕಾಣದಂಥದು
ಕೆಂಪು ಹಸಿರು ನೀಲಿ ಬೆರಸಿ, ಬಿಳಿಯ ಕಪ್ಪು ಕುಡಿಯದೆ
ಎಲೆ ಚಿಮ್ಮುವುದೆಂತು ಜೀವ ಕಾವುಗೊಂಡು ತಳಿಯದೆ ?

ಎದುರಾಗುವ ಮೆರವಣಿಗೆಯ ಎದುರಿಸಲೀ ಜೀವ
ಬೇಕು ಬೇಡ ಟೀಕೆಯಿರದೆ ಎಲ್ಲ ಹಾವ ಭಾವ
ಆಯ್ಕೆ ಏಕೆ, ಏಕೆ ತಾಕಲಾಟ ಏಕೆ ಕಾತರ ?
ಅರ್ಥ ಸಿಗಲು ಅನುಭವಕ್ಕೆ ಜರಿಯಂಚಿನ ಧೋತರ

ಬೇವು ಕಹಿಯೆ, ಆದರೇನು ? ಮರದ ನೆರಳು ತಂಪು
ಕಳೆದು ನೆನೆದ ಅನುಭವದಲಿ ಕಹಿಯೂ ಸವಿ, ಕಂಪು
ಬೇವು ಉರುಳಿ ಉರುವಲಾಗಿ, ಕಬ್ಬು ಜಲ್ಲೆ ನುರಿಯಲಿ
ಕುದಿವ ರಸದ ಸವಿಯು ಆಲೆಮನೆಯಾಚೆಗೂ ಹಬ್ಬಲಿ

# ಸೂರ್ಯಾಸ್ತ

ಇರುಳ ಗೂಳಿಯು ಜಗಿದು
ಉಗಿದ ಬೆಳಕಿನ ಚಿಂದಿ
ಮುದುರಿ ಬಿದ್ದಿದೆ ಬುವಿಯ ತಿಪ್ಪೆಮೇಲೆ.
ಮುರಿದ ಪರಟಿನ ಗುಂಡಿ
ಬಿದಿಗೆ ಚಂದಿರ ದೂರ
ಸಿಡಿದು ಬಿದ್ದಿದೆ ಮಬ್ಬು ತೇವದಲ್ಲಿ

## ಕೃತಜ್ಞತೆ

ಹಳಿಯಬೇಡ ಕಾಮವನ್ನು ಹಾಗೆ ಹೀಗೆಂದು
ಹಳಿಯುವಂತೆ ಹೆತ್ತ ತಾಯನ್ನೇ ಹೋಗು ಹೋಗೆಂದು

ನಿನ್ನನ್ನು ಕರೆಸಿದ್ದು
ಗರ್ಭಕ್ಕೆ ಇರಿಸಿದ್ದು
ಹೊರಬಂದಮೇಲೂ ಮೈ ಸೇರಿ
ಪರಿಪರಿ ಮೆರೆಸಿದ್ದು
ಸುತ್ತಲ ಬದುಕಲ್ಲಿ ಸರಿಗಮ ಹರಿಸಿ
ಬಾಳೆಲ್ಲ ಪಟ್ಟೆ ಪೀತಾಂಬರ ಎನಿಸಿದ್ದು
ಬೇರಾರೂ ಅಲ್ಲ ಕಾಮ;
ಜೀವಕ್ಕೆ ಅವನೇ ಬೇರು
ಅವನೇ ನೀರು
ಆರಿದ ಗಂಟಲಿಗೆ ಇಳಿದ ಸೋಮ

ಹೇಗೆ ಇಳಿಯುತ್ತಾನೋ ಅನಂಗ ಮೈಯ ಅಂಗಾಂಗಕ್ಕೆ
ಹೇಗೆ ತಳಿಯುತ್ತಾನೋ ಎಚ್ಚರ ಜಡದ ಕಣಕಣಕ್ಕೆ !

ಕಣ್ಣಿಗೆ ಹೆಣ್ಣಾಗಿ
ಜಿಹ್ವೆಗೆ ಹಣ್ಣಾಗಿ

ದನಿಯ ಹದಕ್ಕೆ, ಸ್ಪರ್ಶದ ಮುದಕ್ಕೆ
ಘಮಘಮಿಸುವ ಪರಿಮಳದ ಸಹಸ್ರವಿಧಕ್ಕೆ

ಹೇಗೆ ಸುತ್ತುತ್ತಾನೋ ಚದುರ ಬುಗುರಿಗೆ ಹುರಿಯನ್ನು
ಬೀಸಿ ಹೂಡಲು ಆಟದ ಪರಮಪದಕ್ಕೆ !

ಆಹ !
ಹಾಡುವ ಹಕ್ಕಿಯೊ, ಮೋಡವೆ, ಓಡುವ ಮರಿ ತೊರೆಯೇ
ಕಾಡುವ ಹೆಣ್ಣೇ, ಪರಿಮಳ ತೀಡುವ ಮಲ್ಲಿಗೆಯೇ
ಎಳೆಯುವ ಸೆಳವೇ, ಜೀವವ ಸುಲಿಯುವ ಸವಿನೋವೇ
ಕಾಮಿಸಿ ಮಾತ್ರವೆ ಕಾಣುವ ದರ್ಶನದಾ ಗೆಲುವೇ!

ಕಾಮ ಕರುಣಿಸಿದ ಈ ಲೋಕ ಸುಖದ ದೊಡ್ಡ ಕಿಚ್ಚು
ಅವನು ಹಚ್ಚಿದ ಈ ಕಿಚ್ಚಿನಲ್ಲಿ
ಸದಾ ನನಗೆ ಬೇಯುವ ಹುಚ್ಚು

# ಯಾತ್ರೆಯ ನಡುವೆ

ಮರೆಯಲ್ಲಿ ನಿಂತು
ಮಣಿದಿಗಂತಗಳನ್ನು ಬರೆಯುವ
ಸತ್ಯದ ತರಣಿಯೇ
ನನ್ನ ಹರಣದ ನಿಜಗೆಳೆಯ ಇನ್ನಾರು ? ನೀನೇ
ಈ ಮೊಗ್ಗು ಅರಳಿದ್ದು
ಹಂಬಲಕ್ಕೆ ಹೊರಳಿದ್ದು
ಮೆಚ್ಚಿದ ದುಂಬಿಯ ಹುಚ್ಚಿಗೆ
ಕಾಯಿಬಿಟ್ಟು ಫಲಿಸಿದ್ದು
ನಿನ್ನರಸಿ ಅಭಿನಯಿಸಿದ ಮಧುನೃತ್ಯದ ಒಂದೊಂದು ಹೆಜ್ಜೆ.
ಏನೇನನ್ನೋ ಒಲಿದು ಕರೆದು
ನಿನ್ನನ್ನಷ್ಟೇ ಮರೆತದ್ದು ಸಹ
ಕಸಕಡ್ಡಿಗಳನ್ನೆಲ್ಲ ನುಡಿದು
ಪತಿಯ ಹೆಸರನ್ನೇ ಹೇಳಲು ಒಲ್ಲದ
ಸತಿಯ ಲಜ್ಜೆ

ನೋಡು
ನಿನ್ನ ನೆನಪಾದ ಗಳಿಗೆ ಇಲ್ಲಿ
ಹೊನ್ನ ಬೆಳಕು ಹುಟ್ಟಿದೆ
ಮಣ್ಣಿನ ಮರೆಯಲ್ಲಿ ಸಣ್ಣಗೆ
ಮಲ್ಲಿಗೆ ಪರಿಮಳ ಎದ್ದಿದೆ

ಅಲೆಗಳ ಕಿರಿ ಕಿರಿ ಹರಿದು
ಕೆಳಕಡಲಿನ ಅಖಂಡತೆ ತೆರೆದಿದೆ
ಜಾತ್ರೆಗೆ ಬಿದ್ದ ಜೀವಕ್ಕೆ ಉಳಿದ
ಯಾತ್ರೆಯ ನೆನಪಾಗಿ
ಬಿಡಲಾಗದ ಹೆಣ್ಣು ಹೊನ್ನು ಮಣ್ಣು
ನಿನ್ನೊಂದಿಗೆ
ಪಡಲಾಗದ ಸುಖದ ಹಂಬಲದಲ್ಲಿ ಸುಡುತ್ತಿದೆ

# ಸಂಕ್ರಾಂತಿ

ಎಷ್ಟೊ ಸಂಕ್ರಾಂತಿಗಳ ಬಣ್ಣದ ಕಮಾನುಗಳ
ಹಾದು ಬಂದಿದ್ದೇನೆ ಬಡಿದು ರೆಕ್ಕೆ
ಸುಟ್ಟೂ ಸಂದಿದ್ದೇನೆ ಪ್ರಸ್ತುತಕ್ಕೆ

ಬಂಡೆಗಳ ಮೇಲೆ ಬಿದ್ದರು ಏನು ಸಂದಿಗಳ
ಮಣ್ಣಲ್ಲಿ ಬೇರಿಳಿಸಿ ಎದ್ದ ಬೀಜ
ಹೋರಾಟಗಳ ಕಥೆಯ ನುಡಿವ ಗಾಯ ಸಹಸ್ರ
ಮಾಗಿ ಮಲಗಿರುವಂಥ ಚಿತ್ತ ದೇಹ
ತುಕ್ಕು ಹಿಡಿಯುವ ವಸ್ತು ಬಳಕೆಗೇ ಸಲ್ಲದೆ
ಒರೆಯ ಆಭರಣವಾಗಿರದ ಬಾಳು
ಕಾಲ ಬಚ್ಚಿಟ್ಟಿರುವ ಮುತ್ತು ಒಡಲೊಳಗಿರುವ
ಚಿಪ್ಪನ್ನು ಹುಡುಕಿ ಹೊರಟಂಥ ಗೀಳು

ನೂರು ಕಕ್ಕಡ ಹೊತ್ತಿ ಆಸೆ ಧಗಧಗಿಸಿದರು
ಕಡೆಗೆ ದೊರೆತದ್ದೆಲ್ಲ ಬರಿಯ ಮಸ್ಟು
ಆದರೂ ಉರಿ ಎದ್ದ ಕ್ಷಣಭಂಗುರದ ಗಳಿಗೆ
ಕೊಟ್ಟ ಬೆಳಕಿಗೆ ನಾ ಕೃತಜ್ಞ ಶುಭಮಸ್ತು
ದಕ್ಕುವುದು ಬದುಕಿಗಷ್ಟೇ ಕಡೆಗೆ, ಎಲ್ಲ ಸುಖ
ಎಲ್ಲಿತ್ತು, ಹಿಂದೆಂದು ? ಇಲ್ಲ ಮುಂದೂ
ರಾಮರಾಜ್ಯವೆ, ಅಗಸ ಕೊಂಡಾಡಿದಾಳ್ವಿಕೆಯೆ ?
ನುಣುಪು ಕಣ್ಣಿಗೆ ದೂರವಿರುವ ಗುಂಡು

ಬರಲಿ ಸಂಕ್ರಾಂತಿ ಹಳೆಚಿಂತೆ ವ್ಯಥೆಗಳ ಪುಳ್ಳಿ-
ರಾಶಿಗೇ ಬೆಂಕಿಯಿಟ್ಟು
ಬಿತ್ತಿದ್ದು ಬೆಳೆಯಲಿಲ್ಲೆಂಬ ವ್ಯರ್ಥಕೃಷಿಯ
ಬಂಜೆನೋವಿಗೆ ಮದ್ದುಕೊಟ್ಟು
ಕಾದು ಕ್ಯೂ ನಿಂತಿರುವ ಅನಿರೀಕ್ಷಿತಗಳ ಎದೆಯ
ಮರೆಯ ಸರಿಸುವ ಹಸ್ತವಾಗಿ
ಎದುರುಗೊಳ್ಳುವ ವಕ್ಷ ಊರ್ವಶಿಯದಾಗಿರಲಿ
ಅಪ್ಪಿ ಉಣಿಸಲಿ ಎಲ್ಲ ನೀಡಿ

# ದಾಟಿ ತಾಗಲಿ ದೃಷ್ಟಿ ಕಡೆಯ ಪರಿಧಿ

ಪಟ್ಟಿದ್ದೆಲ್ಲ ಕಾಮಕ್ಕೆ ಪ್ರೀತಿಗಲ್ಲ – ಭಜನೆ
ಕುಟ್ಟಿದ್ದೆಲ್ಲ ಮೋಜಿಗೆ ಭಕ್ತಿಗಲ್ಲ
ಮೋರಿಯಲ್ಲಿಳಿದ ಜಲ ಪಾತ್ರದಲ್ಲಿದ್ದರೂ
ಕೊಚ್ಚಿಹೋಗಲು ಮಾತ್ರ, ಕುಡಿಯಲಲ್ಲ
ಅರ್ಥಸಾಧಕ ಗುರಿಯ ಬಿಟ್ಟು ಪಡುತಿರುವ ಸುಖ
ತೀಟೆಗಳ ಪೂರೈಕೆ, ಭೋಗವಲ್ಲ
ನೆರೆ ಹೊರೆಯ ಮೆಟ್ಟಿ ಗಿಟ್ಟಿದ ಅರ್ಥಕಾಮಗಳು
ಪುರುಷಾರ್ಥವೆನ್ನಿಸಲು ತಕ್ಕವಲ್ಲ

ಲಕ್ಷ ವೃಕ್ಷಗಳು ಮೈಲುದ್ದ ನಿಂತಿದ್ದರೂ
ಗುಂಪಾಗಿ ನೆರೆಯದೆ ಅರಣ್ಯವೆಲ್ಲಿ ?
ಗುಂಪಿದ್ದರೂ ಬಂತೆ ತಮತಮಗೆ ಬಂದ ಜನ
ಉದ್ದೇಶ ಸ್ವಂತದ್ದು ಸಂತೆಯಲ್ಲಿ.
ಪಾತ್ರ ಕಥೆ ವಸ್ತು ಸಂವಾದ ಎಲ್ಲಾ ಇದ್ದೂ
ಅರ್ಥವಿದೆ ಕೃತಿಯ ವಿನ್ಯಾಸದಲ್ಲಿ
ಸೂತ್ರ ಕಡಿದರೆ ಮಣಿಯ ಮಾಲೆ ಚೆಲ್ಲಾಪಿಲ್ಲಿ
ವಿನ್ಯಾಸವಿಲ್ಲದೆ ಅರ್ಥವೆಲ್ಲಿ ?

ರಾಮಗಿರಿಯಿಂದ ಹೈಮಾಚಲದ ನೆತ್ತಿಗೆ
ಗಡಿಯ ರಚಿಸಿದ್ದು ಉಜ್ಜಯಿನಿ ಪ್ರತಿಭೆ
ನಾಲ್ಕು ದಿಕ್ಕುಗಳಲ್ಲು ಉಪನಿಷೋದ್ದೇಶಕ್ಕೆ
ದುಡಿದ ತೇಜಕ್ಕೆ ಕೇರಳದ ಮಿತಿಯೆ ?

ಬ್ರಹ್ಮಗಿರಿಯಲ್ಲಿ ಅಶೋಕಚಕ್ರಿಯ ಮಾತು
ಬೋಧಿವೃಕ್ಷದ ನೆರಳು ದಕ್ಷಿಣದಲಿ
ದಕ್ಷಿಣೇಶ್ವರ ಕಾಳಿದೇವಾಲಯದ ಗಂಟೆ
ಮೊಳಗಿತ್ತು ಇಡಿ ಭರತಖಂಡದಲ್ಲಿ

ಕರಿಹಸಿರು ಕೆಂಪುಗಳ ಪಗಡೆಯಾಟದ ಹಾಸು
ಹತ್ತಾರು ಧಾನ್ಯ ಬಿತ್ತಿರುವ ಗದ್ದೆ
ಎಲ್ಲ ಕಾಯಿಗೆ ಒಂದೇ ಹಾಸು, ದಾಳದ ಜೋಡಿ
ನೂರು ರುಚಿ ಒಟ್ಟಾಗಿ ಊಟನಿದ್ದೆ
ವ್ಯಕ್ತಿ ಕೇಂದ್ರಕ್ಕೆ ಹತ್ತು ವೃತ್ತಗಳ ಸುತ್ತುವರಿ
ದಾಟಿ ತಾಗಲಿ ದೃಷ್ಟಿ ಕಡೆಯ ಪರಿಧಿ
ಕೋಟಿ ಬಗೆ ಡೊಂಕು ಸಂಕೀರ್ಣ ನರವ್ಯೂಹದಲಿ
ರಕ್ತ ಪರಿಚಲನೆ ಕ್ಷಣ ತಪ್ಪದಿರಲಿ.

# ಇದಲ್ಲ ತಕ್ಕ ಗಳಿಗೆ

ಗಾಳಿ ಕೂಗುತ್ತಿದೆ
ಕಡಲು ಮೊರೆಯುತ್ತಿದೆ
ಮರ ಗಿಡ ತೋಟ ಗದ್ದೆ ತಲ್ಲಣಿಸಿ ತೂಗಿ
ನೆಲಕ್ಕೆ ಒಲೆಯುತ್ತಿದೆ
ಮೇಘದ ಕಪ್ಪು ಸಲಗಗಳ ದಾಳಿಗೆ ಬೆದರಿ
ಬೆಳಕು ತರಾತುರಿ ತಳಕಿತ್ತಿದೆ
ಚಚ್ಚಿದೆ ಮಳೆ
ಬೆಚ್ಚಿದೆ ಇಳೆ
ಹುಚ್ಚೇರುತ್ತಿದೆ ಆಗಲೇ ಹೆಚ್ಚಿ ಹೋಗಿರುವ ಹೊಳೆಗಳಿಗೆ
ಮುಚ್ಚುತ್ತಿದೆ ದಪ್ಪನೆಯ ಕಪ್ಪುರಗ್ಗು ನೆಲವನ್ನು
ಆ ತುದಿಯಿಂದ ಈ ತುದಿವರೆಗೆ

ಮಗೂ
ಈ ಅಬ್ಬರದಲ್ಲಿ ನಿನ್ನ ಹಂಸಧ್ವನಿ
ಕೇಳುತ್ತದೆ ಹೇಳು ಯಾರ ಕಿವಿಗೆ ?
ಗಂಟೆ ಬಾರಿಸುತಿರಲು ತಂತಿ ಮಿಂಚಿದ ಗಾನ
ಕಂತಿಹೋಗದೆ ಹೇಳು ಮೊರೆತದೊಳಗೆ
ಆದರೂ ಚಿಂತಿಲ್ಲ
ಸರದಿಗಳು ಉಂಟಲ್ಲ !
ನುಡಿತವನ್ನೇ ಬಿಟ್ಟುಕೊಡುವ ಗೋಜಿಲ್ಲ
ನಡೆಯುತಿರಲಿ ಸಾಧನೆ ತನ್ನಷ್ಟಕ್ಕೆ ಒಳಗೊಳಗೆ
ತಿಳಿದಿರಲಿ ಜೊತೆಗೆ
ಮೆಚ್ಚಿಗೆ ನಿರೀಕ್ಷಿಸಲು ನಿನ್ನ ಕಲೆಗೆ
ಇದಲ್ಲ ತಕ್ಕ ಗಳಿಗೆ.

# ಹೊಸ ಸಂವತ್ಸರಕ್ಕೆ

ತಲೆಯಲ್ಲಿ ನೆರೆ, ಕೆನ್ನೆ ಹಣೆಯಲ್ಲಿ ಹಳೆಯ ಬರೆ
ಮೈ ಸುಕ್ಕು, ಉಸಿರಾಟ ಕೊಳವೆ ತುಕ್ಕು
ಕಾಲೆರಡು ಕೋಲು, ಕೈ ಬೀಳು, ದೃಷ್ಟಿಯೆ ಬೀಳು
ಹೊಸ ವರ್ಷ ಬಾ ಬಂದು ನಮ್ಮನ್ನಾಳು

ಬುದ್ಧಿ, ಶ್ರಮ, ಹಣ ಎಲ್ಲ ಸುರಿದು ದುಡಿದಿದ್ದೇವೆ
ಹಗಲು ಇರುಳೆನ್ನದೇ ನಿದ್ದೆಗೆಟ್ಟು
ಹೈಡ್ರೋಜನ್ ಬಾಂಬುಗಳ ಪೇರಿಸಿಟ್ಟಿದ್ದೇವೆ
ಉಳಿಯದಂತೆ ಯಾರೂ ವಿವೇಕಗೆಟ್ಟು

ನಿಟ್ಟುಸಿರು ನೋವು ಕೊಲೆ ಸುಲಿಗೆ, ಎನ್ನದಿರಣ್ಣ
ಹೊಸತು ತಂದಿದ್ದೇವೆ ಬದುಕಿನಲ್ಲಿ
ಬದಲಾಗಿದೆಯೆ ಹೇಳು ಸೃಷ್ಟಿ ಬೇರೆಡೆಯಲ್ಲಿ
ಬೆಟ್ಟ ನದಿ ಕಡಲು ಮೃಗ ಕಾಡಿನಲ್ಲಿ

ಮನೆಯಲ್ಲಿ ಹಾವು, ಹಳೆಮನೆ, ಹತ್ತು ಬಿರುಕುಗಳು
ಒಂದೊಂದು ಸಂದಿಯೂ ಕರೆವ ಸಾವು
ನಿದ್ದೆ ಮಾತಿರಲಿ ಎದ್ದಿರುವಾಗಲೂ ಕೂಡ
ಸಣ್ಣ ಸದ್ದಿಗು 'ಅಯ್ಯೊ ಬಂತು ಹಾವು !'

ಇಂಥ ಹೊತ್ತಲ್ಲಿ ನಿನ್ನಾಗಮನ, ಬಾರಣ್ಣ !
ನಿನ್ನ ಕಾಲಿನ ಗುಣವ ಬಲ್ಲರಾರು ?
ಸಂದು ಬಿಲಗಳ ಬಾಯಿ ಬಂದಾಗಿ, ಬರಲಿರುವ
ತಲೆಮಾರಿಗಾದರೂ ಅಭಯ ಸಾರು.

# ರಥದ ಕಥೆ

ಅಂದು ಇಂದು ಎಂದಿಗೂ
ಲೋಕದ ಥರ ಒಂದೇ
ಅವತಾರಗಳಳಿದರೂ
ಕ್ರಿಸ್ತ ಬುದ್ಧ ಎಳೆದರೂ
ಒಂದೆ ಒಂದು ಇಂಚೂ ರಥ
ಸರಿಯಲಿಲ್ಲ ಮುಂದೆ.

ಅಂಥ ಇಂಥ ರಥವೆ ? ಕೊಂಚ
ಕೊರಕಲತ್ತ ಜಾರಿ
ತಪ್ಪಿತಷ್ಟೆ ದಾರಿ
ಪಥಕೆಳೆಯಲು ಬಂದ ಧರ್ಮ ಅಲ್ಲಲ್ಲೇ ಗೋರಿ !
ಒಳಗೆ ಕುಳಿತ ದೈವದೆಲ್ಲ
ಮಹಿಮೆಯ ಅಳೆದವರೆ ಇಲ್ಲ
ರಾಮಾಯಣ ಭಾರತ ಸಹ
ನಿವಾಳಿಸಿದ ಕಾಯಿ
ಕೃತ ತ್ರೇತರ ತಾತ, ಕಲಿಯ
ನುಡಿತಕೆ ಇದು ಬಾಯಿ

ಹಣೆಯ ಮೇಲೆ ಸಿಕಂದರರ
ಹೆಸರುಗಳನು ಬರೆಸಿದ
ಬಡವರನ್ನು ಅಡಿಗೆ ಹಾಕಿ

ಕಷ್ಟದ ಕಥೆ ಹರಿಸಿದೆ
ಮೈಯ ಸುತ್ತ ಧ್ವಜದ ಬದಲು
ಈಟಿಗಳನೆ ಸಿಗಿಸಿದೆ
ಗುಡುಗಿನೆದೆಯೆ ನಡುಗುವಂತೆ
ಧರ್ರೆನ್ನುತ ತೇಗಿದೆ.

ಲೋಭವೆನುವ ಪೀಠದಲ್ಲಿ
ಲಾಭವೆನುವ ದೇವರ
ಮೆರೆಸುತ್ತಿದೆ ಬಯಕೆಯೆಂಬ
ದೀಪ ಹಚ್ಚಿ ಸಾವಿರ
ಪ್ರಜ್ವಲಿಸಿದೆ ಬೆಳಗಿ ಮುಖ
ಉಜ್ವಲಿಸಿದೆ ಭಕ್ತಿ
ಉಗ್ಘಡಿಸಿದೆ ಭಕ್ತಗಣ
ಉಕ್ಕುತ್ತಿದೆ ಶಕ್ತಿ

ಬೆಳಗುತ್ತಿದೆ ಬೆಂಕಿ ಹತ್ತಿ
ಗುಡಿಸಲುರಿಯ ದೀಪ
ಕಾರ್ಖಾನೆಯ ಚಿಮಣಿ ತೂರಿ
ಚೀರಿ ಬರುವ ಧೂಪ
ನೈವೇದ್ಯಕೆ ಬಡಬಗ್ಗರ
ಮಕ್ಕಳ ತಲೆಕಾಯಿ
ಬೊಬ್ಬಿರಿದಿವೆ ಭೇರಿ ನುಡಿಸಿ
ಧನಿಕರ ಮನೆ ನಾಯಿ

ದೈವ ಮಹಿಮೆ ಕಂಡು ಕೊಂಡ
ಧನಿಕವೃಂದ ಭಕ್ತಿಗೆ
ಶಾಸನಗಳ ಬರೆಸಿಕೊಟ್ಟ
ದತ್ತಿಗಳಿವೆ ಸಾಕ್ಷಿಗೆ

ಅಂಗಭೋಗ ರಂಗಭೋಗ
ದೇವದಾಸಿ ಪೂಜೆಗೆ
ಬಿಟ್ಟ ಬಿಟ್ಟ ಹೊಲಗಳಿವೆ
ಅದ ಕಾಯುವ ಕುಲಗಳಿವೆ
ಖಾಸಾ ಭೇಟಿ ಕೊಡುವುದಿದೆ
ಹೀರಪತಿಗಳು
ಮಹಾಮಂತ್ರಿ, ಬರೀ ಮಂತ್ರಿ
ಬೆನ್ನ ಹಿಂದೆ ಇರುವ ತಂತ್ರಿ
ಕರಿಲಕ್ಷ್ಮೀವರಪಾತ್ರ ಕರೋಡು ಪತಿಗಳು.

ಯಾಜ್ಞವಲ್ಕ್ಯ ಪೈಗಂಬರ
ಯಾರು ಯಾರೋ ಬಂದರು
ವೇದ ಖುರಾನ್ ಸನ್ನೆಗೋಲು
ಅಡಿಗೆ ಕೊಟ್ಟು ಎಳೆದರು
ಜಗ್ಗಲಿಲ್ಲ, ಕಡೆಗೆ ಬಂದ
ಹಿಗ್ಗು ನಗೆಯ ಗಾಂಧಿ
(ಮಂಗಳಗಳ ನಾಂದಿ)
ಎಳೆದ ನೋಡಿ ಒಂದೇ ಸಲ
ಉಫೇ ಉಫೇ ಮಹಾಬಲ
ಸರಿದ ಭರಕೆ ಜರುಗಿ ಚಕ್ರ
ಹೂತೆ ಹೋಯ್ತು ಪೂರ್ತಿ
ಓಂ ಶಾಂತಿಃ ಶಾಂತಿಃ ಶಾಂತಿಃ

# ಬಣ್ಣದ ಕೊಕ್ಕಿನ ಬಾನಾಡಿ ಹಕ್ಕಿ

ಬಣ್ಣದ ಕೊಕ್ಕಿನ ಬಾನಾಡಿ ಹಕ್ಕಿಗೆ
ಮಣ್ಣಿಗಿಳಿಯುವ ತನಕ ಬಾಳಿ ಇಲ್ಲ
ಬಳ್ಳಿ ಗಿಡ ಮರ ಎಲ್ಲ ಬೀಜದಲೆ ಇದ್ದರೂ
ನೆಲದೊಡಲ ಕೃಪೆಯಿರದೆ ಸುಳ್ಳಿ ಎಲ್ಲ

ಬಣ್ಣದ ಕೊಕ್ಕಿನ ಬಾನಾಡಿ ಹಕ್ಕಿಗೆ
ಹಗಲಲ್ಲಿ ದಣಿವು ಆಲಸ್ಯ ಜೊಂಪು
ನಡುರಾತ್ರಿಯಲ್ಲಿ ಚಿತ್ತ ಬೆತ್ತಲಾಗುವ ಹೊತ್ತು
ನೆಲಕಿಳಿದು ಹಾಡುವುದು ಏನು ಇಂಪು !

ಹನಿವ ದನಿ ಎಳೆಗೂಡಿ ಎಳೆಎಳೆಯು ಹೊಕ್ಕಾಡಿ
ಏಳುವುದು ಹೊಳೆಹೊಳೆವ ಕವನವಸ್ತ್ರ
ಅತ್ತ ಕನಸೂ ಅಲ್ಲ ಇತ್ತ ನನಸೂ ಅಲ್ಲ
ಸಂಧಿನೆಲ ಕಾಣಿಸುವ ಸತ್ಯ ವಕ್ರ

ಹಕ್ಕಿ ಹಾಡುವ ಹೊತ್ತು ಸೊಕ್ಕಿರುವ ಜೀವಕ್ಕೆ
ನೆಲಬಿಟ್ಟು ನಿಂತಂಥ ದೆವ್ವ ದಿಗಿಲು
ದಿಗಿಲ ಬೆನ್ನಿಗೆ ಹಗಲು ಮರೆಗಿದ್ದು ಹೊರಬಂದ
ದಿವದ ನಿಧಿ ಪೂರ್ಣ ಸಿಗದಿರುವ ಕೊರಗು

ಹಾಡು ಕೇಳುವ ಹೊತ್ತು, ಕಾಡು ಬೆಳೆಯುವ ಹೊತ್ತು
ಗುಡ್ಡ ನದಿ ಮಾತಾಡಿ ನಗುವ ಹೊತ್ತು
ನಕ್ಷತ್ರಗಳು ಢಿಕ್ಕಿಯಾಗಿ ಚಿತ್ರಸ್ಫೋಟ
ಬದುಕು ಬೆಳೆಸುವುದು, ನನಗಷ್ಟೇ ಗೊತ್ತು

# ಉರುಳಿ ಅರಿವಿನ ಮೋರಿಯಲ್ಲಿ

ಉರುಳಿ ಅರಿವಿನ ಮೋರಿಯಲ್ಲಿ
ನರಳುತ್ತಿರುವೆ
ಇಲ್ಲಿ ನೆಮ್ಮದಿ ಎಲ್ಲಿ ?
ಕೊಳೆತು ನಾರುತ್ತಿರುವ ಹಳೆಯ ಭೂತ ;
ಅದರ ಮೇಲೇ ಮೊಳೆತ ಹೊಸ ಕನಸುಗಳ ತುಡಿತ.
ಎರಡು ಗಡಿಗಳ ನಡುವೆ
ಒಡೆದು ಬಿದ್ದಿದೆ ರೂಪ.
ಹೊಕ್ಕುಳಿನ ಹುರಿ ಕಡಿದು
ಹಳಿ ಬಿಟ್ಟು ಹೊರನಡೆದು
ಪ್ರತ್ಯೇಕತೆಯ ಸುಳ್ಳು ಕೋಟಿ ಕೊರಳುಗಳಲ್ಲಿ
ಕೂಗಿ ದಣಿದಿದೆ ಪಾಪ

ಚಿತ್ತ ಹೊತ್ತ ಮನುಷ್ಯ
ಚಿತ್ತವಿಲ್ಲದ ನೆಲ,
ಬೆಟ್ಟ ಮರ ಗಿಡ ಕಲ್ಲು,
ಹುಲ್ಲು ಪರಿಮಳ ಜಲ ;
ಯಾರು ಉತ್ತಮ, ಯಾರು ಅಧಮ, ಏತಕೆ, ಹೇಗೆ?
ಯಾರು ಪಡೆಯುತ್ತಾರೆ ಯಾರಿಂದ, ಏತಕ್ಕೆ ?
ಹೇಗೆ ದುಡಿಸುತ್ತಾರೆ, ದುಡಿಸಿ ಗುಡಿಸುತ್ತಾರೆ
ಯಾರು ಯಾರನ್ನೇಕೆ ಜೀತಕ್ಕೆ ?

ಯೋಚಿಸಬರದ ಅಶೋಕ
ಋತು ತಪ್ಪದೆ ಸುರಿವ ಚಿಗುರು,
ಯೋಚಿಸಲಾಗದ ಆಲದ ಅರ್ಧ ಎಕರೆ ನೆರಳು
ಯೋಚಿಸಲಾಗದ ಮಾವು,
ಆಲೋಚಿಸಲಾಗದ ಹೂವು,
ಯೋಚಿಸುವ ಮನುಷ್ಯನನ್ನೇ
ಸಾಕುವ ಪರಿಯನ್ನು
ಆಲೋಚಿಸಬೇಕು ನಾವು

ಚಿತ್ತವೇ ಶತ್ರುವೇ ನಮಗೆ ? ಸೃಷ್ಟಿಯ ಹಡೆದ
ಮೂಲಕ್ಕೆ ಮಿಥ್ಯವೇ ?
ಅದಕ್ಕೂ ಮಿಾರಿದ ಶಕ್ತಿ ಜಡಕ್ಕೆ ಸಲೀಸು ದಕ್ಕಿ
ಸತ್ಯ ಪ್ರತ್ಯಕ್ಷವೆ ಅದಕ್ಕೆ ?
ಕಡಿಸಿಕೊಳ್ಳುವ ನೋವು ಕಡಿಯುವ ಜೀವಕ್ಕಿರದ
ಸ್ಥಿತಿ ಮರ್ತ್ಯಮಾತ್ರವೆ ?
ಮೂಲಪ್ರಜ್ಞೆಯ ಬಿಂಬ
ಕೋಟಿ ಚೂರುಗಳಾಗಿ
ಹಿರಿಕಡಲು ಹನಿಹನಿಗಳಾಗಿ ಒಡೆದ ವಿಕಾರ
ಗುರುತಿಸಿದರೂ ನಿಜವ ರುಚಿಯಲ್ಲಿ, ಹನಿಗೆಲ್ಲಿ
ಹಡಗುಗಳ ತೇಲಿಸುವ ಅಧಿಕಾರ ?

# ಯಾರು ಬಂದರೆ ತಾನೆ ಏನು ?

ನಿನಗೆ ಅರವತ್ತಾಯಿತಾ ಎಂದದ್ದು
'ಬರೋ ಹೊತ್ತಾಯಿತಾ' ಎಂದು ಕೇಳಿಸಿ
ಸಣ್ಣಗೆ ಬೆಚ್ಚಿದೆ ಒಳಗೆ.
ಯಾರು ಕೇಳಿದ್ದು ಹಾಗೆ ?
ಜೊತೆಗಿದ್ದ ಅಳಿಯನ ? ಮಗನ ? ಅಥವಾ
ಸಿನಿಮಾ ರೇಸು ಕಾರು ಬಾರು ಎಂದು
ಸದಾ ಜೊತೆಗೆ ಪೋಲಿ ಅಲೆಯುವ
ಅವನ ಗೆಳೆಯನ ?
ಏನು ಕೇಳಿದರೊ ?
ಈ ಬೆಚ್ಚನೆ ಆರೋಗ್ಯ ಕಂಡು
ಮೆಚ್ಚಿಗೆ ಹುಟ್ಟಿ ಕೇಳಿದರೊ?
ಯಾರಿಗೆ ಗೊತ್ತು
ಹುಚ್ಚು ಜನ ಅಸೂಯೆ ಪಟ್ಟೇ ಆಡಿದರೊ ?

ಯಾರು ಬಂದಾರೆಂದು ಇದ್ದೀತು
ಯಾರು ಬಂದರು ತಾನೆ ಏನು ದಿಗಿಲು ?
ಬಂದವರು ತಂದ ಋಣದಲ್ಲಿ ತೂಗಾಡುತಿವೆ
ನೂರು ಉರುಳಿನ ನೆರಳು
ಕನಸು ಕಲಿಸಿದ ಅಮ್ಮ
ಕಂಡು ತೀರಿದ ಅಪ್ಪ

ಕೈ ಹಿಡಿದ ಕಣ್ಮಣಿಯೊ
ತನ್ನ ಲೆಕ್ಕಗಳಲ್ಲಿ ನನ್ನ ಎತ್ತರ ಅಳೆದು
ನಟ್ಟನಡು ಚೌಕದಲಿ ಹರಾಜು ಹಾಕಿದ ಮಾಯೆ.
ನುಂಗಲಾಗದೆ ಸುಟ್ಟ ಬಿಸಿ ಬಿಸೀ ತುಪ್ಪ.
ಮಿರಾಯಿ ಮಕ್ಕಳು, ಜೊತೆಗೆ ಕರಾರಿ ನಂಟರು
ವೃತ್ತಿ ಹವ್ಯಾಸಿ ನೆರೆಹೊರೆಗೆ ಹುಟ್ಟಿದ ಎಷ್ಟೋ
ಪಟಾಕಿ ಗೆಳೆಯರು
ಬೆಳಗಿನ ತುಷಾರ ಸರಿದು, ಕೆರಳಿದ ಮಧ್ಯಾಹ್ನ ಬೆಳೆದು
ಕನಸಿದ್ದ ಮುಖದಲ್ಲಿ ಸತ್ಯದ ಕಠೋರ ದಾಡೆಗಳು !

ತುಂಬು ತಿಂಗಳ ಬದುಕು ಬರಿ ತಂಗಳು ಈಗ
ನಿನ್ನೆ ಮೊನ್ನೆಯ, ಇವತ್ತು ನಿನ್ನೆಯ
ನಾಳೆ ಇಂದಿನ ಕಾರ್ಬನ್‌ಕಾಪಿ,
ತರ್ಕಕ್ಕೆ ಗಣಿತಕ್ಕೆ ಅಂಕೆಗಳ ಮಣಿತಕ್ಕೆ
ಸಿಕ್ಕ ಬದುಕಲ್ಲಿ ಸುಖ ಸಿಗದ ಪಾಪಿ.
ಇದೆಲ್ಲ ಮೀಟಿ, ತಾರೆಗಳನ್ನೇ ದಾಟಿ
ನಿಂತ ಅನಂತದ ಹನಿ ಹನಿ ಆಮಂತ್ರಣ.
ಕಳ್ಳ ಹೆಜ್ಜೆಯನಿಟ್ಟು ಬಂದ ಕಾಮದ ಬೆಕ್ಕು
ಕತ್ತಲಲ್ಲಿ ತಿಂದು ಬಿಕ್ಕಿದ ಬದುಕಿನವಶೇಷಕ್ಕೆ
ಅನಿರೀಕ್ಷಿತ ಅಮೃತದ ಸಿಂಚನ

ಹೀಗಿರುತ್ತ
ಯಾರು ಬಂದರೆ ತಾನೆ ಏನಂತೆ ?
ಬಾ ಎಂದು ಕರೆದರೂ ಇಲ್ಲ ಚಿಂತೆ
ಬಂದು ಮುಟ್ಟಲಿ ನನ್ನ
ಮುಟ್ಟ ಬಿಡಿಸಲಿ ಸಣ್ಣ

ಪಂಜರದಿ ಸೆರೆಸಿಕ್ಕ ಗುಟ್ಟುಗಳ ಸಂತೆ.
ಹಕ್ಕಿ ಹಾರಲಿ ಬಿಡಿ ಬಾನಿನಲ್ಲಿ
ಸುಖವುಕ್ಕಿ ಈಜಲಿ ಬೆಳಕುಗಡಲಿನಲ್ಲಿ
ದೂರ ಮಣಿಯಾಗುತ್ತ ಸಮೆದು ಕಣವಾಗುತ್ತ
ತಾನೆ ಬಾನಾಗುತ್ತ ಕಾಣದಲ್ಲಿ

# ತಿರುಗಿ ನೋಡೇ ಒಮ್ಮೆ

ಹಳೆಯೂರ ಧಿಕ್ಕರಿಸಿ
ಹೊಸ ಊರುಗಳ ಕನಸಿ
ಕಟ್ಟಿದ್ದ ಕೆಡವಿ ಹೊರಟಿರುವ ಹೆಣ್ಣೆ
ತಿರುಗಿ ನೋಡೇ ಒಮ್ಮೆ ಇಳಿದ ದಿನ್ನೆ

" ನಾ ಮುಡಿದ ಹೂವು, ನಾ ತೊಟ್ಟ ಕೈಬಳೆ, ಹಣೆಗೆ
ಇಟ್ಟ ಸಿಂಧೂರ, ಎದೆಕವಚ ನೀನೇ " ಎಂದು
ನನ್ನೂರ ದಾರಿಯನು ತೂರಿ ತೇರಿನ ಕಳಸ
ಏರಬಲ್ಲ ಸವಾರಧೀರ ಬಾರೋ "ಎಂದು,
ಮುದಿಸಿ ಮೈಬಿಲ್ಲಿನಲಿ ಹೂಡಿದವಳೆ
ಹೊತ್ತ ಭಾರದ ಕೆಳಗೆ ತೆತ್ತ ಧನ್ಯತೆ ಪಡೆದು
ತಾಳಲಾಗದ ಸುಖದಿ ನರಳಿದವಳೆ,
ಎಲ್ಲಿ ಹೋಯಿತು ಹೇಳೆ ಹೆಣ್ಣೆ, ಘಮ ಘಮ ಹಣ್ಣೆ
ಬಿಗಿದ ಹೆಡೆ ಫಟ್ಟೆಂದು ಕಡಿಯಿತೇನೇ ?

" ಮೊಗ್ಗು ಕಚ್ಚಿದ ಎದೆಗೆ
ಹೂವು ಕಚ್ಚಿದ ಕವೆಗೆ
ಚಿಗುರು ಸೊಕ್ಕಿದ ಕೆನ್ನೆ, ಕೆಂಪುತುಟಿಗೆ
ಹಗಲಿರುಳು ತೂಗಿದವ
ಕಾಲವನೆ ತೇಗಿದವ
ಮಳೆ ಕರೆವವನೆ ನನ್ನ ಮಣ್ಣ ಬಿಸಿಗೆ
ಬಾರೋ ಬಾರೋ ಬದುಕು ಹಗುರ ಬಾರೋ
ಹೇರಿಕೊಳ್ಳುವೆ ನಿನ್ನ ಭಾರ ತಾರೋ "

ಎಂದು ಕೂಗಿದ ಹೆಣ್ಣೆ
ಜೇನು ಹನಿಯುವ ಹಣ್ಣೆ
ಇರುಳು ಇಳಿಯುವ ಮೊದಲೆ ಎಲ್ಲಿ ಹೋದೆ ?
ಮರುಳು ಹಾಡುವ ಮೈಯ ತೊರೆದೆ ಹೇಗೆ ?

ಅಲಕಾವತಿಯ ಕನಸುಬುರುಡೆಗಳ ಬಿಗಿದಪ್ಪಿ
ವರುಷಶಾಪವ ಈಜಿ ಬಂದ ಜೀವ
ಹೇಗೆ ತಾಳೀತು ಬಾಳೀತು ಉದುರಲು ಮುತ್ತು
ಬರಿಯ ಚಿಪ್ಪನು ಮರೆತು ಕುದಿವ ನೋವ ?
ನಾಳೆಗಳ ಸೂತ್ರದಲಿ ನಿನ್ನ ನೆನಪನು ಕೋದು
ಬಾಳುವುದೆ ಜೀವನವೆ ಹೇಳು ಚಿನ್ನ
ಸಾರ ತೀರಿದ ಬಾಳು ತುರಿದ ತಿರುಳಿನ ಕರಟ
ದನಿಸತ್ತ ಚೇಷ್ಟೆಗಳ ಮೂಕ ಸನ್ನೆ

# ವಿಸರ್ಜನೆ

ಮಣ್ಣನ್ನು ಹಿಡಿದೆತ್ತಿ ಮಣ್ಣಲ್ಲಿ ಬಿಡುವಾಗ
ಕಣ್ಣು ಮುಚ್ಚುತ್ತೇನೆ ಕೊನೆಯಾಗಲಿ;
ನಡುವೆ ಹತ್ತಿರ ಸುಳಿದು ನೂರು ಕಾಮನ ಬಿಲ್ಲ
ಮೀರಿ ಮಿಂಚಿದ ಚಿಗರೆ ಪರಿದೋಡಲಿ
ಬಿಟ್ಟ ಕೈಯನು ಸುಟ್ಟ ಕೊರಡನಲಿ ವ್ಯಥೆಯಿಲ್ಲ,
ಮರ್ತ್ಯಲೋಕದ ಮಿತಿಗೆ ಮಾನ ಬರಲಿ
ಎಲ್ಲಿದ್ದರೂ ಪ್ರೀತಿ, ರೀತಿಗಳ ಹೆಡೆಮೆಟ್ಟಿ
ಕಡಲಾಗಿ, ತೊರೆಗೆ ಬಿಡುಗಡೆ ನೀಡಲಿ

# ಸಂಜೆಬೆಳಕು

ಬಿಲ್ಲಿಗೆ ಏರಿದೆ ಬಾಣ
ಕೊರಳಿಗೆ ಹಾರಿದೆ ಪ್ರಾಣ
ಭಯವಿಸ್ಮಯದಲಿ ಗೀತೆಯ
ಕೊನೆಚರಣದ ಗಾನ

ಸಂಜೆಯ ಸೂರ್ಯನ ಕೆಂಪಿಗೆ
ಕಂಪಿಸುತಿದೆ ಮರದೆಲೆಯಲಿ
ಸಂಚರಿಸಿಯು ನಿಂತಂತಿದೆ
ಗಾಳಿಗು ನಿತ್ರಾಣ

ಮಳೆಸುರಿದೂ ಹೊಳೆಹರಿದೂ
ಹಕ್ಕಿ ಹಗುರ ದನಿಗರೆದೂ
ಲೋಕ ಏಕೊ ಮಂಕು ಮೋರೆ
ಹಾಕಿ ನಿಂತ ಭಾವ
ಚಲಿಸುತ್ತಿದೆ ಹಳೆ ನೆರಳಿಗೆ
ದಣಿವ ಕಳೆವ ತಾಯ ಉಡಿಗೆ
ಹಗಲ ಹಚ್ಚಿ ಅದರೊಳಿಡುವ
ಸೃಜನ ಶೀಲ ಇರುಳಿಗೆ

ಅರಳಿದೆ ಅರಿಯುದ ಹೊಸ ಭವ
ಕ್ರಯವಾಗುತ ಹಳೆಯನುಭವ
ಹೊಸ ಕಾಣ್ಕೆಗೆ ಕಣ್ಣೆತ್ತಲಿ
ಚಡಪಡಿಸದೆ ಜೀವ

# ವಾಹನದ ಗೀಳು

ಏನು ವಾಹನದ ಗೀಳು ಅಂಟಿತ್ತೊ!
ಬೆಳಗ್ಗೆ ಅದನ್ನೇರಿಯೇ ಎಚ್ಚರಾಗಿ
ರಾತ್ರಿ ತೂಕಡಿಸಿಯೇ ಕೆಳಕ್ಕಿಳಿಯುವಷ್ಟು ಮೆಚ್ಚಾಗಿ
ಕಚ್ಚಿತ್ತು ಯಂತ್ರದ ಹುಚ್ಚು ವ್ಯಾಮೋಹ.
ಸದಾ ಒತ್ತಿ ಒತ್ತಿ
ಬ್ರೇಕೇ ಕಾಲು, ಹ್ಯಾಂಡಲೇ ತೋಳು
ದೀಪವೇ ಕಣ್ಣು, ದನಿ ಹಾರನ್ನು
ಇದರ ಮೂಲಕವೇ ಪ್ರಪಂಚ ಸಂಪರ್ಕ
ಹೊನ್ನು ಹೆಣ್ಣು ಮಣ್ಣು
ಇದಿಲ್ಲದಿದ್ದರೆ ಗತಿ ಇನ್ನೇನು
ಇದೇ ನಾನು ಎನ್ನಿಸಿಬಿಟ್ಟಿತ್ತು.
ಮೊನ್ನೆ ರಾತ್ರಿ ಟಾಪ್‌ಗೇರಿನಲ್ಲೇ ಹಾಯುತ್ತ
ಎದುರಿಗೆ ಹಠಾತ್ತನೆ ಲಾರಿ !
ಬ್ರೇಕು ಒತ್ತುತ್ತಲೇ ಜಾರಿ, ಅಮ್ಮಾ ಅಂತ ಚೀರಿ
ಬಾಡಕ್ಕೇ ಬಿದ್ದೆ

ಯಾರೋ 'ಬಾ, ಸಾಕು' ಎಂದರು
ಇಳಿದು ಹೊರಕ್ಕೆ ಬಂದೆ
'ನೋಡು ಹೇಗಿತ್ತು' ಎಂದರು
ನೋಡಿದೆ, ನೋಡಿಕೊಂಡೇ ಇರಲಿಲ್ಲ ಮುಂಚೆ ಎನ್ನುವಂತೆ

ಲಾರಿಯ ಬುಡಕ್ಕೆ ಬಿದ್ದಿತ್ತು, ರಕ್ತಸಿಕ್ತ,
ಕಾಲು ತೋಳು ಜಜ್ಜಿತ್ತು
ಕಣ್ಣು ಸಿಡಿದಿತ್ತು, ಹಾರನ್ ತಣ್ಣಗಾಗಿತ್ತು
ಸುತ್ತ ಜನ, ಏನೇನೋ ಮಾತು ಸನ್ನೆ–
'ಅಯ್ಯೋ ಪಾಪ', 'ಕಾದಿತ್ತಪ್ಪ ವಿಧಿ'
'ಇಷ್ಟೆ ಕಣಪ್ಪ ಎಲ್ಲ' ಎನ್ನುವಂತೆ

ಈಗ ಎಲ್ಲಿಗೆ ? ಎಂದೆ.
ಕನಸು ಸಿಡಿದ ಮೇಲೆ ಎಲ್ಲೆಂದರಲ್ಲಿಗೆ ಎಂದರು
'ಕನಸಾ ? ಅಬ್ಬ, ಗೊತ್ತಾಗಲೇ ಇಲ್ಲ ಇಷ್ಟು ಕಾಲ
ಎಂಥ ಭ್ರಮೆ ! ಎಷ್ಟು ದಟ್ಟ, ಎಷ್ಟು ಗಟ್ಟ' ಎನ್ನುತ್ತಿರುವಂತೆ
ಅದು ಹಾಗೆಯೇ, ಕಟ್ಟಿಕೊಂಡದ್ದು
ಕಳೆದುಕೊಂಡ ಮೇಲೆಯೇ ತಿಳಿಯೋದು
ನಡಿ ಹೋಗೋಣ ಎಂದರು

ಹೊರಟೆವು
ನಿಂತಂತೆ ಹೋಗುತ್ತಲೇ ಇದ್ದೇವೆ
ನೆನೆದಲ್ಲೇ ಇದ್ದೇವೆ ಎನ್ನುವಂತೆ.
ಶುರುವಾಯಿತು ಭಾರಿ ಗಾಳಿಮಳೆಗಳ ದಾಳಿ, ದಟ್ಟಕಾಡು
ಹಾದೇ ಹೋದೆವು. ಏನಾಶ್ಚರ್ಯ !
ತೊಯ್ಯಲಿಲ್ಲ ಆರಲಿಲ್ಲ ಚುಚ್ಚಲಿಲ್ಲ
ಕಚ್ಚಲಿಲ್ಲ ಒಂದು ಸೊಳ್ಳೆ.
ದಾರಿಯಲ್ಲಿ ಭಾರಿ ಬೆಟ್ಟ ಅಡ್ಡ ಬಂದು ಹೊರಳಿ
'ಛಿ, ದುರಭ್ಯಾಸ, ನೇರ ಹೋಗು' ಎಂದರು
ಒಳಗೆ ಹೋದರೆ, ಸೇದಿ ಬಿಟ್ಟ ಹೊಗೆಯಲ್ಲಿ ತೆಗೆದಂತೆ
ಸಾವಿರ ಬಣ್ಣದ ಸಾವಿರ ದೃಶ್ಯ
*ಒಲಿಯುವ ಕೆಲೆಯುವ ಸಾವಿರ ಭಾವದ ನೆರಳು*

ತೂರಿ ಚೆಲ್ಲಾಡಿದಂತೆ ಸುಖ
ತೂಗುವ ಬೆಳ್ಳಿ ಬಂಗಾರ ಹವಳದ ಬಳ್ಳಿ, ಹರಳು,

ನೋಡಿ ದಂಗಾದೆ, ತೋರಿಸುತ್ತ, "ನೋಡು
ಬೆಟ್ಟ ಬಯಸುವ,
ಇನ್ನೂ ಅದಕ್ಕೆ ದಕ್ಕಿಲ್ಲದ ಬಾಳಿನ ಕನಸು" ಎಂದರು
"ಆಗ ಇದು ಕಾಣುತ್ತಿರಲಿಲ್ಲ" ಎಂದೆ
"ಅದು ಹಾಗೆಯೇ
ಗಡಿಗಳ ನಡುವೆ ಬಾಗಿಲು ಕಿಟಕಿ ಇಲ್ಲ
ಇನ್ನೊಂದಕ್ಕೆ ಹಾಯುವಂತಿಲ್ಲ
ಈಗಾದರೆ ಬಂಧನವಿಲ್ಲ. ಎಲ್ಲಿ ಹೇಳು
ಹಸಿವಾ ? ಎಂದರು
ಇಲ್ಲ
"ದಾಹ ?"
"ಇಲ್ಲ"
"ನೋವು ?" ಆಯಾಸ ? ನಿದ್ದೆ ?
"ಇಷ್ಟೂ ಇಲ್ಲ ಎಷ್ಟು ವಿಚಿತ್ರ
ಹಾಗಾದರೆ ಪಟ್ಟ ಅನುಭವ ಅಷ್ಟು ಸುಳ್ಳಾ ?" ಎಂದೆ
"ಸುಳ್ಳಲ್ಲ ಎಲ್ಲ ಸತ್ಯದ ನೆರಳು
ಸಂತೆಯ ನೋಟಕ್ಕೆ, ಅಲ್ಲಿಯ ಆಟಕ್ಕೆ
ಬಯಸಿದ ಬೇಟಕ್ಕೆ ಕೊಟ್ಟದ್ದ ಕಂತೆ,
ಬಿಟ್ಟು ನಿಜ, ಎಸೆದು ಸುಳ್ಳು
ಆಕಾರ ಬಣ್ಣ ಕೊಳಕು ಹರಕು ಅದಕ್ಕೆ
ಇದಕ್ಕಲ್ಲ" ಎಂದು
ನನ್ನ ಕಡೆ ಬೆರಳು ಮಾಡಿದರು,
ಯಾರಿದು ಎಂದು ನೋಡಿಕೊಳ್ಳಲು ಹೋದರೆ

ಅರರೆ ! ಏನಿದು !
ಬೊಂಬೆಯಾ !
ಅಲ್ಲ
ಗಾಳಿ, ನೀರು, ನೆಲ ?
ಅಲ್ಲವೇ ಅಲ್ಲ.
ಅಸ್ತಿತ್ವಕ್ಕೆ ಅವಲಂಬನವೇ ಇಲ್ಲ
ಗಾಬರಿಯಾಗಿ
ಅಯ್ಯೋ ಎಂದು ಸೂರು ಹಾರುವಂತೆ ಕೂಗಿ
ಯಾರೋ ಮತ್ತೆ ಒಳಕ್ಕೆ ಎಸೆದಂತೆ ಎದ್ದರೆ
ಮತ್ತೆ ಅದೇ ರೂಮು
ಅದೇ ಪುಸ್ತಕ, ಕ್ಯಾಲೆಂಡರು, ಅದರೊಳಗಿನ ಅದೇ ಲತಾ
ಹಾಡುತ್ತಿರುವ ಚಿತ್ರ ಹಾಡಿತೋ ಎನ್ನುವಂತೆ
ರೇಡಿಯೋದಿಂದ ಅವಳ ಹಾಡೇ ಬರುತ್ತಿದೆ
ಲಾರಿಯಡಿ ಬಿದ್ದಿದ್ದ ವಾಹನ ಸಹ
ಮೊದಲಿನಂತೇ ಇರುತ್ತ
ಮತ್ತೆ ಓಡಾಟಕ್ಕೆ ಸಿದ್ಧವಾಗಿದೆ

# ಚದುರಂಗದಾಟ

ಹಾಲ್ಗಲ್ಲ ಮೇಲೆ ಹೊಳಪಿಟ್ಟ ಸಿಂಹಾಸನದ ಹಾಗೆ
ಜ್ವಲಿಸಿತು ಅವಳು ಕುಳಿತ ಪೀಠ
ಫಲಭರಿತ ಬಳ್ಳಿಗಳ ಕಡೆದ ರತ್ನಸ್ತಂಭ
ಹೊತ್ತು ನಿಂತಿದ್ದವು ದರ್ಪಣಗಳ
ಅದರ ಮರೆಯಿಂದ ಇಣುಕುತ್ತಿದ್ದನೊಬ್ಬ ಸ್ವರ್ಣಮದನ
(ಅವನ ರೆಕ್ಕೆಯ ಹಿಂದೆ ಮತ್ತೊಬ್ಬ ತನ್ನ ಕಣ್ಮರೆಸಿದ)
ಸಪ್ತಮುಖದಾಕೃತಿಯ ದೀಪಗುಚ್ಛದ ಜ್ವಾಲೆ
ದರ್ಪಣಕ್ಕೆ ಬಿದ್ದು ಇಮ್ಮಡಿಸಿ
ಟೇಬಲ್ಲ ಮೇಲೆ ಪ್ರತಿಫಲಿಸಿತ್ತು. ಅವಳ
ಆಭರಣಗಳ ಕಾಂತಿ ಅದರೊಡನೆ ಸ್ಪರ್ಧಿಸಿತು,
ಸ್ಯಾಟಿನ್ ಕೇಸುಗಳಿಂದ ಬೆಳಕು ಹೊಳೆ ಹರಿಯಿತು.
ಬಿರಡೆ ಬಿಚ್ಚಿಟ್ಟಿದ್ದ ವರ್ಣಮಯ ದಂತದ ಗಂಧಕೋಶಗಳಿಂದ
ಹೊರಸೂಸಿದವು ಅವಳ ಅಪರಿಚಿತ ಸಂಯುಕ್ತ ಪರಿಮಳಗಳು,
ಚೂರ್ಣಲೇಪನಗಳು
ದಿಕ್ಕೆಡಿಸಿ ಕಾಡಿ ಗೊಂದಲಗೊಳಿಸಿ ಅರಿವನ್ನು
ವಾಸನೆಗಳಲ್ಲಿ ಮುಳುಗಿಸಿಬಿಟ್ಟವು.
ಕಿಟಕಿಯಿಂದೊಳಬಂದ ತಂಗಾಳಿಯಲ್ಲಿ ಏರಿ
ಮೋಂಬತ್ತಿ ಉರಿಯ ನೀಳ ಜ್ವಾಲೆಗಳ ದಟ್ಟಯಿಸಿ
ಛಾವಣಿಯ ನೆತ್ತಿಯಲಿ ಕಡೆದ ವಿನ್ಯಾಸಗಳ
ಕದಡಿದವು ಹೊಗೆ ಚೆಲ್ಲಿ
ತಾಮ್ರಸಾರವ ಹೀರಿ ಬೆಳೆದ ಕಡಲಿನ ಬೃಹತ್ ಸಸ್ಯರಾಶಿ

ವರ್ಣಮಯ ಶಿಲೆಯ ಚೌಕಟ್ಟನೊಳಗೆ
ಹಸಿರು ಕಿತ್ತಳೆಯಾಗಿ ಉರಿದಿತ್ತು. ಆ ಖಿನ್ನ
ಕಾಂತಿಯಲಿ ಈಜಿತ್ತು ಕೆತ್ತಿದ್ದ ಕಡಲವರಾಹ.
ಎಂದಿನದೊ ಬೆಂಕಿಗೂಡಿನ ಮೇಲೆ ಶೋಭಿಸಿತ್ತು
ಕಾಡು ನಡತೆಯ ಚಕ್ರವರ್ತಿಯ ದುರಾಚಾರಕ್ಕೆ
ಬಲಿಯಾಗಿ ಫಿಲೋಮೇಲ ಪಡೆದ ರೂಪಾಂತರ
ಆಗಲೂ ಮರುಭೂಮಿ ತುಂಬ ಅಪ್ರತಿಹತ
ಮಧುರ ನಾದವ ಚೆಲ್ಲುತ್ತಿದ್ದ ನೈಟಿಂಗೇಲ್
ಆಗಲೂ ಗೋಳಿಟ್ಟಳಾಕೆ, ಬೆನ್ನಟ್ಟಿತ್ತು ಲೋಕ ಇನ್ನೂ
ಕೊಳಕು ಕಿವಿಗಳಿಗೆ ಜಗ್ ಜಗ್ ನಾದವೆನಿಸಿತ್ತು.
ಕಾಲದವಶೇಷಗಳನ್ನೆಷ್ಟೊ ಕಡದಿತ್ತು ಆ ಭಿತ್ತಿಯಲ್ಲಿ ;
ದಿಟ್ಟಿಸುವ ರೂಪಗಳು ಕಟ್ಟನಿಂದ ಹೊರ ಬಾಗುತ್ತ
ಹುಷ್ಷೆಂದು ಎಚ್ಚರಿಸಿ ಮೌನ ನೆಲೆಗೊಳಿಸಿದವು ಕೊರಡಿಯಲ್ಲಿ
ಮಹಡಿ ಮೆಟ್ಟಿಲ ಮೇಲೆ ಹೆಜ್ಜೆ ತೂರಾಡಿದವು.
ಉರಿಯ ಬೆಳಕಿನ ಕೆಳಗೆ, ಕುಂಚದಡಿಗೆ,
ಬೆಂಕಿ ಮೊನೆಯಂತೆ ಪರಡಿದ ಅವಳ ಕೇಶ
ಮಾತಾಗಿ ಜ್ವಲಿಸಿ ನಿಶ್ಶಬ್ದವಾಗುತ್ತಿತ್ತು ಕ್ರೂರವಾಗಿ

ನನ್ನ ಮೈ ಯಾಕೋ ಬೆಚ್ಚಗಿದೆ ಈ ರಾತ್ರಿ
ಬೆಚ್ಚಗಿದೆ ಹೌದು, ಇದ್ದು ಬಿಡು ಜೊತೆಗೆ,
'ಮಾತಾಡು ನನ್ನ ಜೊತೆ, ಯಾಕೆ ಯಾವಾಗಲೂ
ಮಾತಾಡುವುದೆ ಇಲ್ಲ. ಎಲ್ಲಿ, ಮಾತಾಡು.
'ಏನು ಯೋಚಿಸುತಿರುವೆ ? ಯಾವ ಯೋಚನೆ ? ಏನು ?
'ನೀ ಯೋಚಿಸುವ ವಿಷಯ ನನಗೆಂದಿಗೂ ತಿಳಿಯದು,
ಯೋಚಿಸು'
ಸತ್ತವರು ಮೂಳೆ ಕಳಕೊಂಡ ಇಲಿದೊಗರಲ್ಲಿ
ನಾವಿದ್ದೇವೆ ಎಂದು ನನ್ನ ಎಣಿಕೆ

'ಏನು ಶಬ್ದ ಅದು ?

ಕದದ ಕೆಳಗಿನ ಗಾಳಿ

'ಈಗಾದ ಶಬ್ದ ಏನದು ? ಏನು ನಡೆಸಿದೆ ಗಾಳಿ ?

ಇಲ್ಲ, ಈಗಲು ಸಹ ಏನಿಲ್ಲ

ಏನೂ ತಿಳಿಯದೆ ನಿನಗೆ, ಏನೂ ಕಾಣದ ನಿನಗೆ,
ಏನೂ ನೆನಪಾಗದೇ ನಿನಗೆ ?

ನೆನಪಿದೆ ನನಗೆ

ಅವನ ಕಣ್ಣುಗಳೀಗ ಮುತ್ತಾಗಿವೆ
ಬದುಕಿರುವೆಯೋ ಇಲ್ಲವೋ ? ಖಾಲಿಯೇ ನಿನ್ನ ತಲೆ ?
ಆಹ ! ಆ ? ಶೇಕ್ಸ್‌ಪೀರಿಯನ್ ಸಂಗೀತ
ಏನು ಸೊಗಸು
ಎಷ್ಟು ಶ್ರೇಷ್ಠ
ಏನು ಮಾಡಲಿ ಈಗ ? ಏನು ಮಾಡಲಿ ನಾನು ?
ಇರುವ ಹಾಗೇ ಹೀಗೆ, ಹೊರಗೋಡಿ ಬಿಡುವೆ,
ಬೀದಿಯಲ್ಲಿ ನಡೆವೆ
ಬಿರಿಗೂದಲನ್ನು ಇಳಿಬಿಟ್ಟು ಹೀಗೆ. ಏನು ಮಾಡೋಣ ನಾಳೆ ?
ಏನು ಮಾಡೋಣ ಮುಂದೆಂದಿಗೂ ?
ಬಿಸಿ ನೀರು ಹತ್ತಕ್ಕೆ
ಮಳೆ ಬಂತು ಅನ್ನು, ಮುಚ್ಚಿದ ಕಾರು ನಾಲ್ಕಕ್ಕೆ
ಒಂದಾಟ ಚದುರಂಗ ಆಡೋಣ
ರೆಪ್ಪೆಯಿಲ್ಲದ ಕಣ್ಣನ್ನೊತ್ತುತ್ತ ಮತ್ತು
ಕದವ ಬಡಿಯುವುದನ್ನೆ ಕಾಯುತ್ತ

ಲಿಲ್ಲಿ ಗಂಡ ಸೈನ್ಯದಿಂದ ರಜ ಪಡೆದು ಹೊರಟಾಗ, ನಾ ಹೇಳಿದೆ–
ನೇರವಾಗೆ ಅಂದೆ, ಸ್ವತಃ ನಾನೇ ಅಂದೆ.
**ದಯವಿಟ್ಟು ಮುಗಿಸಿ ಹೊತ್ತಾಯಿತು,**

ಆಲ್ಬರ್ಟ್ ಬರುತ್ತಿದ್ದಾನೆ, ನೋಡಲು ಲಕ್ಷಣವಾಗಿರು ಕೊಂಚ
ಹಲ್ಲು ಕೊಳ್ಳಲು ಕೊಟ್ಟ ದುಡ್ಡು ಏನಾಯ್ತು ಅಂತ
ಕೇಳುತ್ತಾನೆ ಅವನು
ನಾನೇ ಇದ್ದೆನಲ್ಲ ಅವನು ದುಡ್ಡು ಕೊಟ್ಟಾಗ
ತೆಗೆಸಿಬಿಡು ಎಲ್ಲ. ಒಳ್ಳೆ ಸೆಟ್ಟನ್ನ ಕೊಂಡುಕೊ
ನೋಡಲಿಕ್ಕಾಗದಂತಿದ್ದೀಯ ಅಂದ, ನನ್ನಾಣೆಗೂ.
ನನಗೂ ಅಷ್ಟೆ ಅಂದೆ ನಾನು, ಪಾಪ ಆಲ್ಬರ್ಟ್ ಬಗ್ಗೆ
ಸ್ವಲ್ಪ ಯೋಚಿಸು ಲಿಲ್ಲಿ
ನಾಲ್ಕು ವರ್ಷಗಳಾಯ್ತು ಸೈನ್ಯ ಸೇರಿ
ಎರಡು ದಿನ ಏನೋ ಖುಷಿಗಾಗಿ ಬರುತ್ತಿದ್ದಾನೆ.
ನೀನು ಅವನಿಗದನ್ನು ಕೊಡದಿದ್ದರೆ ಬೇರೆಯವರಿದ್ದಾರೆ ಅಂದೆ.
ಹೌದೆ ಎಂದಳು. ಅಂಥದ್ದೇನಿಲ್ಲ ಇರುತ್ತೆ ಅಂದೆ.
ಹಾಗಿದ್ದ ಮೇಲೆ ಯಾರಿಗೆ ನಾನು ಋಣಿ ಅಂತ
ಬಲ್ಲೆ ಅಂದಳು. ಹಾಗೆ ಹೇಳುತ್ತ ನನ್ನನ್ನು
ತಿವಿಯುವಂತೆ ನೋಡಿದಳು
ದಯವಿಟ್ಟು ಮುಗಿಸಿ ಹೊತ್ತಾಯಿತು.

ಹಿಡಿಸದಿದ್ದರು ನಿನಗೆ ಹೇಗೋ ನಿಭಾಯಿಸು ಅಂದೆ.
ನಿನಗಾಗಲಿಲ್ಲವೋ ಗಂಟು ಬೀಳುತ್ತಾರೆ ಬೇರೆಯವರು.
ಆಲ್ಬರ್ಟ್ ಏನಾದರೂ ದಾರಿತಪ್ಪಿದರೆ ನಿನಗೆ
ತಿಳಿಸದಿದ್ದುದರಿಂದ ಅಲ್ಲ.
ನಾಚಿಕೆ ಅನ್ನಿಸದೆ ಇಷ್ಟು ಮುದಿಯಾಗಿ ಕಾಣುವುದಕ್ಕೆ ಅಂದೆ
(ಅವಳಿಗಿನ್ನೂ ಬರಿಯ ಮೂವತ್ತೊಂದು)
ಜೋಲುಮುಖ ಹಾಕಿ, ನಾನೇನು ಮಾಡಲಿ ಹೇಳು,
ಎಲ್ಲ ಮಾತ್ರೆಯ ಫಲ, ತೆಗೆಸುವುದಕ್ಕೆ ನುಂಗಿದ್ದು ಅಂದಳು
(ಈಗಾಗಲೇ ಐದು, ಜಾರ್ಜ್ ಹೆರಿಗೆಯಲ್ಲಂತು
ಮುಗಿದೆ ಹೋಗಿತ್ತು ಕಥೆ)

ಎಲ್ಲ ಸರಿಹೋಗುತ್ತೆ ಅಂತ ಪಂಡಿತರು ತಿಳಿಸಿದ್ದರೂ ನೋಡು
ಮೊದಲಿನಂತಾಗಲೇ ಇಲ್ಲ ಅಂದಳು
ನೀನೊಂದು ಪೆದ್ದು ಕಣೆ,
ಹೋಗಲಿ ಆಲ್ಬರ್ಟ್ ನಿನ್ನನ್ನ ಒಂಟಿ ಬಿಡದಿದ್ದಲ್ಲಿ
ಆದಂತಾಯಿತು ಬಿಡು. ಮಕ್ಕಳು ಬೇಡವಾದರೆ
ಮದುವೆ ಆಗುವುದೇಕೆ ಅಂದೆ
**ದಯವಿಟ್ಟು ಮುಗಿಸಿ ಹೊತ್ತಾಯಿತು.**

ಇರಲಿ, ಆ ಭಾನುವಾರ ಆಲ್ಬರ್ಟ್ ಮನೆಯಲ್ಲಿದ್ದ
ಹಂದಿ ಮಾಂಸದ ಒಳ್ಳೆ ಸೊಗಸಾದ ಅಡಿಗೆ
ನನ್ನನ್ನೂ ಕರೆದಿದ್ದರು. ಅದರ ರುಚಿ ನೋಡಲು
**ದಯವಿಟ್ಟು ಮುಗಿಸಿ ಹೊತ್ತಾಯಿತು.**
**ದಯವಿಟ್ಟು ಮುಗಿಸಿ ಹೊತ್ತಾಯಿತು.**
ಗೂ ನೈಟ್ ಬಿಲ್, ಗೂನೈಟ್ ಲೌ. ಗೂನೈಟ್ ಮೇ, ಗೂನೈಟ್
ಟಾ ಟಾ ಗೂನೈಟ್, ಗೊನೈಟ್
ಗುಡ್‌ನೈಟ್ ಗೆಳತಿಯರೆ, ಗುಡ್ ನೈಟ್ ಪ್ರಿಯ ಗೆಳತಿಯರೆ,
ಗುಡ್ ನೈಟ್

ಗುಡ್ ನೈಟ್

ಮೂಲ : *A Game of Chess*
ಕವಿ . ಟಿ. ಎಸ್. ಎಲಿಯಟ್
ಅನುವಾದ : ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

# ಹಂಸಗಳ ಹಿಂಡು

ಶರತ್ಕಾಲದ ಚೆಲುವ ಹೊದ್ದು ನಿಂತಿವೆ ಮರ
ಕಾಡುದಾರಿಗಳೆಲ್ಲ ಒಣಗಿವೆ
ಕಾರ್ತಿಕದ ಸಂಜೆ ಬೆಳಕಲ್ಲಿ ಮಿಂಚುವ ನೀರು
ಶಾಂತ ಆಗಸವನ್ನು ಪ್ರತಿಫಲಿಸಿದೆ,
ಬಂಡೆಗಳ ನಡುವೆ ಮಡುನಿಂತ ನೀರಿನ ಮೇಲೆ
ಐವತ್ತೊಂಬತ್ತು ಹಂಸ ತೇಲಿವೆ

ನಾನು ಮೊದಲೆಣಿಕೆ ಮಾಡಿದ್ದು ನೆನಪಿದೆ, ಅದು
ಹತ್ತೊಂಬತ್ತು ಶರದೃತುಗಳಷ್ಟು ಹಿಂದೆ
ಕಂಡೆ, ಇದೊ ಎಣಿಸಿಯೇ ಬಿಟ್ಟೆ ಎನ್ನುವ ಮುಂಚೆ
ಥಟ್ಟನೇರಿ ಸವಾರಿ
ಹಾರಿಬಿಟ್ಟವು ಅಂಚೆ
ಮೊರೆವ ರೆಕ್ಕೆಯ ತೂಗಿ
ವೃತ್ತಾಕಾರ ಸಾಗಿ
ಮುರಿದ ಬೃಹದಾಕಾರ ಚಿತ್ರಚಿತ್ರಗಳಾಗಿ

ಪರಿಭಾವಿಸಿದ್ದೆ ಆ ಉಜ್ವಲ ಜೀವಿಗಳ ಹಿಂದೆ
ಘಾಸಿಗೊಂಡಿದೆ ಈಗ ಹೃದಯ
ಮೊದಲ ಸಲ ಸಂಜೆ ಬೆಳಕಲ್ಲಿ. ಈ ದಡದಲ್ಲಿ
ನಿಂತು, ತಲೆಮೇಲೆ
ಹಕ್ಕಿ ರೆಕ್ಕೆಯ ಗಂಟೆ ಬಡಿತ ಆಲಿಸಿ, ಆಹ !

ನಡೆದಿದ್ದ ಹಗುರಾಗಿ ಆಗ
ಎಲ್ಲ ಬದಲಾಯಿಸಿದೆ ಈಗ

ದಣಿಯದಿವೆ ಈ ಪ್ರಣಯ ಜೋಡಿಗಳು ಈಗಲೂ
ಜೊತೆ ಹರಿವ ತಂಪಾದ ತೊರೆಯನ್ನು ಈಜುತ್ತ
ಗಾಳಿಯನ್ನೇರುತ್ತ
ಮುಪ್ಪು ತಾಗದ ಹೃದಯ ತಾಳುತ್ತ
ಎಲ್ಲೆ ಹಾರಲಿ ಅವು, ಆರದಿವೆ ಅವಕೆ ರತಿಯುದ್ರೇಕ
ಜೊತೆಯನು ಒಲಿಸಿ ಗೆಲ್ಲುವ ತವಕ

ನಿಂತ ನೀರಿನ ಮೇಲೆ ಶಾಂತ ತೇಲಿವೆ ಹಕ್ಕಿ
ಏನು ಮೋಹಕ, ಏನು ಗೂಢ !
ಯಾವ ಕೊಳದಲ್ಲಿ, ಸರೋವರದ ಅಂಚಲ್ಲಿ
ಯಾವ ಜೊಂಡುಗಳಲ್ಲಿ ಬೀಡು ಬಿಡುವುವೊ ಮತ್ತೆ
ಯಾರ ಕಣ್ಣಿಗೊ ಹಬ್ಬವಾಗಿ ನಲಿಯುವ ಹೊತ್ತೆ
ಹಾರಿಹೋದವು ಹಂಸ ಎಂದು ಅರಿಯುವೆನೆ ?

ಮೂಲ *The wild Swans at Coole*
ಡಬ್ಲ್ಯು. ಬಿ. ಯೇಟ್ಸ್

# ಮಗಳಿಗಾಗಿ ಪ್ರಾರ್ಥನೆ

ಊಳಿಡುತ್ತಿದೆ ಮತ್ತೆ ಬಿರುಗಾಳಿ. ನನ್ನ ಮಗು
ತೊಟ್ಟಿಲಿನ ಕಟಕಟೆ ಹೊದಿಕೆ ಮರೆಗಡಗಿ ನಿದ್ದೆಮಾಡುತ್ತಿದೆ,
ಅಟ್ಲಾಂಟಿಕಕ್ಕೆ ಹುಟ್ಟಿ ಅಟ್ಟಿ ಹಾಯುವ ಗಾಳಿ
ಹುಲ್ಲು ಛಾವಣಿಯ ಮೆದೆಯ ಎತ್ತಿ ಹಾರಿಸದಂತೆ
ತಡೆವ ಅಡ್ಡಿಯೆ ಇಲ್ಲ — ಒಂದು ಬೆತ್ತಲೆ ಗುಡ್ಡ
ಗ್ರೆಗರಿ ಕಾಡನ್ನಷ್ಟು ಬಿಟ್ಟು. ಮನಸ್ಸಿಗೆ ಏಕೋ
ಅತಿ ವಿಷಣ್ಣತೆ ಕವಿದು ಕಳೆದೊಂದು ತಾಸಿನಿಂದ
ಪ್ರಾರ್ಥಿಸುತ್ತಿದ್ದೇನೆ ನಾನು, ಅತ್ತಿಂದಿತ್ತ ತಿರುಗುತ್ತ ಶತಪಥ

ಪ್ರಾರ್ಥಿಸುತ್ತಿದ್ದೇನೆ ಶತಪಥ ತಿರುಗುತ್ತ
ನನ್ನ ಈ ಎಳೆಮಗುವಿಗಾಗಿ. ಕೇಳುತ್ತಿದೆ :
ಕಡಲ ಮೇಲಿನ ಗಾಳಿ ಕೂಗು ಹಾಕುತ್ತಿದೆ ಮೇಲೆ ಗೋಪುರದಲ್ಲಿ,
ಸೇತುವೆ ಕಮಾನುಗಳ ಬುಡದಲ್ಲಿ, ಸೆರೆಗೊಂಡ
ತೊರೆಯ ದಂಡೆಗೆ ಬೆಳೆದ ಎಲ್ಮ್ ವೃಕ್ಷಗಳಲ್ಲಿ
ಚಂಡ ಸಾಗರದ ಮಾರಕ ಮುಗ್ಧತೆಗೆ ಹುಟ್ಟಿ
ಉನ್ಮತ್ತ ನಗಾರಿ ಬಡಿತಕ್ಕೆ ಕುಣಿಯುತ್ತ
ಬರಲಿದ್ದ ಕಲ್ಪ ಇದೊ ಬಂದೆ ಬಿಟ್ಟಿತು ಎನಿಸಿ
ಭ್ರಮಿಸುತ್ತಿದ್ದೇನೆ ನಾನು ಉದ್ದೀಪ್ತ ಲಹರಿಯಲ್ಲಿ.

ಚೆಲುವು ಹರಸಲಿ ಅವಳ ಒಂದು ಮಿತಿಯಲ್ಲಿ
ಆಗುಂತುಕನ ಕಣ್ಣು, ಕನ್ನಡಿಯೆದುರು ನಿಂತ ತನ್ನ
ದಿಕ್ಕೆಡಿಸುವಷ್ಟು ಇರದಿರಲಿ, ಅತಿ ಚೆಲುವೆಯರು

ಚೆಲುವೆ ಜೀವನದ ಪರಮಾರ್ಥ ಎಂದೆಣಿಸಿ
ಸಹಜ ಕಾರುಣ್ಯಕ್ಕೆ ಎರವಾಗಿ ಬಾಳುವರು,
ಯೋಗ್ಯವಾದದ್ದನ್ನು ಆಯ್ದುಕೊಳ್ಳಬಲ್ಲ
ಹೃದಯ ತೆರದಿಡಬಲ್ಲ ಆಪ್ತತೆಯ ಕಳಕೊಂಡು
ನಿಜ ಸ್ನೇಹ ಸಿಗದೆ ಬಾಳುವರು. ಅಂಥ ಚೆಲುವೆ ಹೆಲೆನ್
ಎಂಥ ನೀರಸ ಮಂಕುಬಾಳ್ವೆ ನಡೆಸಿದ್ದಾಯ್ತು !
ಮುಂದೊಬ್ಬ ಪೆದ್ದನಿಂದೆಷ್ಟು ತೊಂದರೆ ಬಂತು !
ಕಡಲ ನೊರೆಯಿಂದೆದ್ದ, ತಂದೆ ತೀರಿದ್ದ
ಆ ಸೌಂದರ್ಯರಾಣಿ ಏನೆಲ್ಲ ಪಡೆಯುವುದಿತ್ತು !
ಆದರೂ ಅವಳು ಪತಿಯನ್ನಾಗಿ ಆಯ್ದದ್ದು
ಕಿಸುಗಾಲ ಕಮ್ಮಾರನನ್ನ !
ಇಂಥ ಸುಭಗೆಯರು ನಿಸ್ಸಂದೇಹವಾಗಿಯು ತಮ್ಮ
ಸಪ್ಪೆಯೂಟಕ್ಕೆ ಮತ್ತೇನೋ ಮಸಾಲೆಯನ್ನ
ಬೆರಸಿ ತಿನ್ನುವರು, ಹೀಗಾಗಿ ಅಕ್ಷಯಪಾತ್ರೆ ವ್ಯರ್ಥವಾಗುವುದು

ನಯ ನಡಾವಳಿ ಮುಖ್ಯ ಕಲಿಯಬೇಕಾದ್ದು ಅವಳು,
ಹೃದಯ ದಾನಕ್ಕೆ ಸಿಕ್ಕುವುದಲ್ಲ : ಅತಿ ಚೆಲುವು
ಇಲ್ಲದವರೆಲ್ಲರೂ ಶ್ರಮಿಸಿ ಪಡೆವಂಥದು.
ಸಾಕಾರ ಚೆಲುವಿಗೇ ಮರುಳಾದವರುಕೂಡ
ಚೆಲುವಿನಿಂದಾಗಿಯೇ ವಿವೇಕ ಗಳಿಸುವರು.
ಹುಚ್ಚಲೆದು, ಒಲಿದು, ಯಾರಿಗೂ ನಲ್ಲ ತಾನೆಂದು
ಭ್ರಮೆ ತಳೆದು ಕಂಗೆಟ್ಟ ಎಷ್ಟೊ ಬಡಪಾಯಿಗಳು
ಕರೆವ ಅಂತಃಕರಣದಲ್ಲಿ ನೆಲೆನಿಲ್ಲುವರು,

ಮರೆಗೆ ಹಚ್ಚಿಗೆ ಬೆಳೆದ ಮರವಾಗಿರಲಿ ಅವಳು
ಮೂಡುವ ವಿಚಾರಗಳು ಹಕ್ಕಿ ಹಾಡಿನ ಹಾಗೆ
ನಾದದ ಉದಾತ್ತತೆಯನ್ನು, ಬೇರೆ ಜಂಜಡವಿರದೆ
ಹಂಚುತ್ತಿರಲಿ ಸುತ್ತ ಎಲ್ಲ ಕಡೆಗೆ.
ಅಟ್ಟ ಹೋದರೂ ಅದು ಆಟಕ್ಕಾಗಿರಲಿ
ಜಗಳವನ್ನೂ ಸಹ ಖುಷಿಗಷ್ಟೆ ಕಾಯಲಿ.
ಹಸಿರಾದ ಅಶೋಕ ಮರದಂತೆ ಬಾಳಲಿ ಅವಳು
ಬೇರಿಳಿಸಿ ಒಂದೇ ನಿರಂತರ ಪ್ರಿಯ ಸ್ಥಳದಲ್ಲಿ.

ಬತ್ತಿ ಹೋಗಿದೆ ನನ್ನ ಚಿತ್ತ ಇತ್ತೀಚೆಗೆ
ನಾನೊಲಿದ ಜೀವಗಳು, ನಾನೊಲಿದ ಸೌಂದರ್ಯ
ಮೇಲು ನೆಲೆಗೇರದೆ. ಆದರೂ ಅದಕ್ಕೆ ಗೊತ್ತು
ಉಸಿರು ಕಟ್ಟಿಸುವ ದ್ವೇಷ ಎಲ್ಲಕ್ಕೂ ಮೀರಿದ ಕೇಡು
ಎಂಬ ಸತ್ಯ. ದ್ವೇಷಕ್ಕೆ ನೆಲೆಗೊಡದ ಮನಸ್ಸಿದ್ದ ಪಕ್ಷಕ್ಕೆ
ಯಾವುದೇ ದಾಳಿ ಬಿರುಗಾಳಿ ಹೊಡೆತಗಳೂ
ಹರಿಯಲಾರದು ಹಕ್ಕಿಯನ್ನು ಮರದೆಲೆಯಿಂದ

ಎಲ್ಲಕ್ಕೂ ಹೀನವಾದದ್ದು ಬೌದ್ಧಿಕ ದ್ವೇಷ
ಧೋರಣೆಯೆ ಶಾಪ ಎನ್ನುವುದ ಅರಿಯಲಿ ಅವಳು
ನಾನೆ ಕಂಡಿಲ್ಲವೆ ? ಹೆಣ್ಣು ಜೀವಗಳಲ್ಲೆ ಅತಿ ಚೆಲುವೆಯೊಬ್ಬ
ಅಕ್ಷಯ ಪಾತ್ರದಿಂದಲೆ ಮೂಡಿ ಬಂದವಳು
ಮತಭ್ರಾಂತಳಾಗಿ ತನ್ನ ಹಠಕ್ಕೆ ಬಿದ್ದು
ಸಾಧುಜನ ಶುಭವೆಂದು ತಿಳಿದ ಸಮಸ್ತವನ್ನೂ
ಅಕ್ಷಯ ಪಾತ್ರವನ್ನೂ ರೋಷಕಾರುವ ಹಳೆಯ
ಗಾಳಿತಿದಿಗಾಗಿ ಮಾರಿ ಬಿಟ್ಟದ್ದನ್ನು.

ಎಲ್ಲ ದ್ವೇಷಗಳನ್ನೂ ಹೀಗೆ ಹೊರಗಟ್ಟಿ ತೋ
ಮರಳಿ ಪಡೆಯುವುದು ಆತ್ಮ ಮೂಲ ಮುಗ್ಧತೆಯನ್ನು

ತಾನು ಆತ್ಮಾರಾಮ, ತನಗೆ ತನಿಂದಲೇ ಆನಂದ ಸಂತೃಪ್ತಿ
ಆತಂಕ ಕೂಡ, ತನ್ನಿಚ್ಛೆಯೆನ್ನುವುದೆಲ್ಲ
ದೈವೇಚ್ಛೆಯೇ ಎಂದು ತಿಳಿಯುವುದು. ಅಂಥವಳು
ಯಾರೆ ಮುಖ ಗಂಟಿಡಲಿ, ಎಷ್ಟೇ ಊಳಲಿ ಗಾಳಿ
ಎಲ್ಲ ತಿದಿ ಬಿರಿಯಲಿ, ಸುಖಿಯಾಗಿ ಉಳಿಯುವಳು.

ಸಕಲ ವಿಧಿಬದ್ಧ ಸಭ್ಯಾಚಾರ ಸಂಪನ್ನ
ಗೃಹಕ್ಕೆ ಕರೆದೊಯ್ಯಲಿ ಕೈಹಿಡಿದವನು ಅವಳನ್ನು
ಸೊಕ್ಕು ದ್ವೇಷಗಳು ರಸ್ತೆ ಬದಿಯಲ್ಲಿ
ಮಾರಾಟಕ್ಕಿಟ್ಟಂಥ ಸರಕುಗಳು
ಹುಟ್ಟಬಲ್ಲವು ಹೇಗೆ ಸೌಂದರ್ಯ ಮುಗ್ಧತೆ
ಶಿಷ್ಟ ನಡತೆಗೆ ಪರಂಪರೆಗೆ ಎಡೆಯಿಲ್ಲದಲ್ಲಿ ?
ಶಿಷ್ಟಾಚಾರವೆಂದರೆ ಸಮೃದ್ಧ ಅಕ್ಷಯ ಪಾತ್ರೆ
ಹಬ್ಬುವ ಆಲಕ್ಕೆ ಬೇರೆ ಹೆಸರೇ ಪರಂಪರೆ

ಮೂಲ *Prayer for my daughter*
ಕವಿ : W.B. ಯೇಟ್ಸ್

# ಆಫ್ರೋದಿತೆ

ದೇವಿ ಆಫ್ರೋದಿತೆ
ಸಕಲ ವೈಭವದ ಸಿಂಹಾಸನವ ಏರಿರುವ ರೂಪ ವಿಖ್ಯಾತೆ
ಎಲ್ಲರಿಗು ಮಿಗಿಲು
ಸಾವಿಗೂ ದಿಗಿಲು
ಎನ್ನಿಸುವ ಸ್ಯೂದೇವ ಪಡೆದಂಥ ಮಗುವೆ
ಅಂಗಲಾಚುವೆ ದೇವಿ ಬಳಿಸಾರಿ ಅಡಿಯು
ದುಃಖ ಕೊರಗುಗಳಿಂದ ಸೀಳದಿರು ಎದೆಯ
ಹಿಂದೆ ನೀ ಬಂದಂತೆ ಎಷ್ಟೊ ಸಲ ಬಳಿಗೆ
ಬಾರೆ ಆಫ್ರೋದಿತೆ, ಬಾ ನನ್ನ ಕಡೆಗೆ

ದೂರದಲಿ ಕೇಳುತಿರುವಂತೆಯೇ ನನ್ನ ದನಿ
ತಂದೆ ಸ್ಯೂಸನ ದಿವ್ಯ ಮಂದಿರವನಿಳಿದು
ಮುಗಿಲಿರದ ನೀಲಿಯಲಿ ರೆಕ್ಕೆಗಳ ಪಟಪಟಿಸಿ ಗುಬ್ಬಚ್ಚಿ ಹಿ
ಸಿಂಗಾರದಲಿ ಎಳೆವ ಬಂಗಾರ ರಥವೇರಿ ಬರುತಿದ್ದೆ ಬಳಿಗೆ
ಬಂದು ಬದಿನಿಂತು ಆ ಮಧುರ ಅಧರದಲಿ
ಸೂಸುತಿರೆ ಸವಿನಗೆ
ನನ್ನ ಕೇಳಿದೆ ನೀನು
"ಏನು ಹೇಳೇ ಹೆಣ್ಣೆ, ಏನು ನಿನ್ನರಕೆ
ಎದೆಗೆ ಕಿಚ್ಚಿಟ್ಟಂಥ ಹುಚ್ಚು ಬಯಕೆ ?
ನನ್ನ ಮಾಯೆಯ ನೆರವು ಬೇಕೆ ಅದಕೆ ?
ನಿನ್ನ ತೋಳಲಿ ಯಾರ ತಂದು ಕೆಡವಲಿ ಹೇಳೆ
ಯಾರಿಂದ ನಿನಗಿಂಥ ಗೋಳೆ ?"

ಕಂಡ ಕ್ಷಣ ದೂರ ಓಡಿದರು ಬಲು ಬೇಗನೇ
ಹತ್ತುವಳು ಬೆನ್ನು
ಕೊಟ್ಟ ಕಾಣಿಕೆಯ ಕಿತ್ತೆಸೆಯುವಳು ಆದರೂ
ಕೊಡುಗೈಯ ಹೆಣ್ಣು
ಪ್ರೀತಿಸಳು ಯಾರನೂ, ಆದರೂ ನೀನೊಲಿಯೆ
ಮಾಗುವುದು ಹಣ್ಣು

ಬಾ ಬೇಗ ಈ ಎಲ್ಲ ದುಃಖ ಯಾತನೆಯಿಂದ
ಎತ್ತಿ ಕಾಪಾಡು
ತೊಡಕೆಲ್ಲ ಪರಿಹರಿಸಿ ಎದೆ ಬಯಸಿದಂಥ
ಇಷ್ಟಾರ್ಥಗಳ ನೀಡು
ಉತ್ತರಿಸು ಬಾ ರಾಣಿ
ಬದಿನಿಂತು ಕೈಗೆ ಕೈ ಹೆಣೆದು ಮುದ ನೀಡು

ಮೂಲ : ಗ್ರೀಕ್ ಕವಯಿತ್ರಿ ಸ್ಯಾಫೋ
(ಕ್ರಿ. ಪೂ. 6-7ನೇ ಶತಮಾನ)

# ಪಕ್ಷಿತೀರ್ಥ

ದಕ್ಷಿಣ ಭಾರತದಲ್ಲಿ ಚೆಂಗಲ್‌ಪೇಟೆ, ಅಲ್ಲಿ
ತಿರುಕ್ಕುಳಕ್ಕುಂಡ್ರಂ ಎಂಬ ಪುಟ್ಟ ಊರಲ್ಲಿ
ಪ್ರಸಿದ್ಧವಾಗಿದೆ ಒಂದು ಬೆಟ್ಟದಲ್ಲಿನ ಗುಡಿ
ದಿನವೂ ಮಧ್ಯಾಹ್ನದಲ್ಲಿ
ಗೊತ್ತಾದ ಹೊತ್ತಿನಲ್ಲಿ
ಇಳಿಯುತ್ತವೆ ಜೋಡಿ ಹಕ್ಕಿ
ಆ ದೇವಾಲಯದ ನೆತ್ತಿಯಲ್ಲಿ.

ದೇವಾಲಯದ ಮುಂದೆ ಭಾರಿ ಜನಸ್ತೋಮ
ಗಂಭೀರ ಗತಿಯಲ್ಲಿ ನಡೆದು ಬಂದರೆ ಹಕ್ಕಿ
ದಾರಿಬಿಡುವರು ಮಂದಿ ಹಿಂದೆ ಸರಿದು
ಕಾದಿರುವ ಪೂಜಾರಿ ಸಾಷ್ಟಾಂಗ ಎರಗುವನು
ಭಯಭಕ್ತಿಯಿಂದ ಅವುಗಳೆದುರು.
ನಡೆಯುವುದು ಶಿವಪೂಜೆ ಗಂಟೆ ಬಡಿದು
ನಗಾರಿ ಹೊಡೆದು

ಸಿಹಿ ಹುಗ್ಗಿ ನೈವೇದ್ಯ ಶಿವಮೂರ್ತಿಗೆ
ಬಡಿಸುವನು ಪೂಜಾರಿ ಹಕ್ಕಿಗಳಿಗೆ.
ಬಟ್ಟಲು ತುಂಬ ಪ್ರಸಾದ ಹೊಟ್ಟೆ ತುಂಬ ತಿಂದು
ಮತ್ತೆ ಜಗಿವುವು ಹಕ್ಕಿ ಗಾಳಿಯಲ್ಲಿ
ಸುತ್ತುವುವು ಮೂರು ಸಲ ಗುಡಿ ಶಿಖರವನ್ನು
ಬಿಚ್ಚಿ ರೆಕ್ಕೆಯ ಧೀರ ರೀವಿಯಲ್ಲಿ.
ನೀಲಾಗಸದ ಕೆಳಗೆ ಬಿಳಿ ಹಾಯಿಗಳ ಜೋಡಿ
ಚೆಲುವು ಪ್ರೀತಿಗೆ ಕೂಡಿ ಕಣ್ಣಮೋಡಿ

ಎಲ್ಲಿಂದ ಬರುವುವೋ ಎಲ್ಲಿ ಸಾಗುವುವೋ
ಯಾರೂ ತಿಳಿಯರು ಇದರ ಗೂಢವನ್ನು
ಜನ ಹೇಳುವರು ಒಂದು ಐತಿಹ್ಯವನ್ನು
ಅರುಣೋದಯದ ವೇಳೆ ಹಿಮಾಲಯದ ತಡಿಯಿಂದ
ಹೊರಡುವುವು ಹಕ್ಕಿ ಗಿರಿಗೆ ನಮಿಸಿ
ದಕ್ಷಿಣಕ್ಕೆ ಹಾಯುತ್ತ ಕಾಶಿಯನು ಸೇರಿ
ಗಂಗೆಯಲಿ ಮೀಯುವುವು ಮತ್ತೆ ಹಾರಿ
ಈ ಗುಡಿಗೆ ಬಂದು ನೈವೇದ್ಯ ಪಡೆದು
ತ್ರಿಪ್ರದಕ್ಷಿಣೆ ಸಲಿಸಿ ಶಿವಮೂರ್ತಿಗೆ
ಸಾಗುವುವು ಮುಂದೆ ರಾಮೇಶ್ವರಕ್ಕೆ
ಅಲ್ಲಿ ಸಂಧ್ಯೆಯನ್ನಾಚರಿಸಲಿಕ್ಕೆ

ಮೂಲ : ಮೋತಿಲಾಲ್ ಜೋತ್ವಾನಿ
ಸಿಂಧಿ ಕವನ

ಡಾ॥ ಲಕ್ಷ್ಮೀನಾರಾಯಣ ಭಟ್ಟರ ಈ ಕವನ ಸಂಗ್ರಹ ನನಗೆ ತುಂಬ ಸಂತೋಷವನ್ನು ಕೊಟ್ಟಿದೆ. ಪ್ರಸಿದ್ಧ ಕವಿ ಕೀಟ್ಸ್ ಒಮ್ಮೆ ಹೇಳಿದ – 'ಗಿಡಕ್ಕೆ ಎಲೆ ಬರುವಷ್ಟು ಸಹಜವಾಗಿ ಕಾವ್ಯ ಬರಬೇಕು' ಎಂದು. ಇಲ್ಲಿ ಕಾವ್ಯ ಅಷ್ಟೇ ಸಹಜವಾಗಿ ರೂಪತಾಳಿದಂತೆ ಭಾಸವಾಗುತ್ತದೆ. ಆದರೆ ಇದರ ಹಿಂದೆ ಸುಮಾರು ಇಪ್ಪತ್ತು ವರ್ಷಗಳ ಶ್ರದ್ಧಾವಂತ ಅಭ್ಯಾಸವಿದೆ, ಪ್ರಯೋಗವಿದೆ, ಯಶಸ್ವಿ ಕಾವ್ಯರಚನೆ ಇದೆ.

ಭಟ್ಟರ ಹಲವು ಕವನಗಳಲ್ಲಿ ಒಂದು ವಿಶಿಷ್ಟವಾದ, Traumatic ಎನ್ನಬಹುದಾದ, ಅನುಭವಕ್ಕೆ ಜೀವ ಹೊಂದಿಕೊಳ್ಳುವ, ಈ ಹೊಂದಿಕೊಳ್ಳುವ ಪ್ರಕ್ರಿಯೆಯಲ್ಲೇ ಜಾಗ್ರತವಾಗುವ ದರ್ಶನ ವಿದೆ. ಮನುಷ್ಯನ ಪುನಶ್ಚೇತನ ಪ್ರಕ್ರಿಯೆ ಇಲ್ಲಿ ಕಾಣುತ್ತದೆ.

ಇಲ್ಲಿಯ ಕವನಗಳದ್ದು ದೀರ್ಘ ಕಾಲ ವಿಶಾಲ ಆಕಾಶಗಳ ಅರಿವನ್ನು ಸದಾ ಜಾಗ್ರತವಾಗಿರಿಸಿಕೊಂಡೇ ಮಾತನಾಡುವ ದನಿ. ಸ್ವಲ್ಪ ಹೆಚ್ಚು ಕಡಿಮೆ ಯಾವ ಕವನವನ್ನು ಓದಿದರೂ ವೃಕ್ಷದಲ್ಲಿ ಜೀವರಸ ಹರಿಯುತ್ತಿರುವಂತೆ ಇಡೀ ಕವನದಲ್ಲಿ ಈ ಅರಿವು ಹರಿಯುತ್ತಿರುತ್ತದೆ. ಈ ಕಾಲ ಆಕಾಶಗಳ ಅರಿವಿನೊಂದಿಗೆ ಸೃಷ್ಟಿಯ ಭಾಗವಾಗಿ ತನ್ನನ್ನು ಕಾಣುವ ಚೇತನದ ಮಾತು ಇಲ್ಲಿ ಕೇಳುತ್ತದೆ.



ಭಟ್ಟರು ನವೋದಯ ನವ್ಯ ಪರಂಪರೆಗಳನ್ನು ಹಾದು ತಮ್ಮ ದನಿಯನ್ನು ಉಳಿಸಿಕೊಂಡವರು. ಅವರ ಕಾವ್ಯ ಈಗಾಗಲೇ ಓದುಗರಿಗೆ ಶ್ರೀಮಂತವಾದ ಪ್ರತಿಫಲ ಕೊಡುತ್ತಿರುವಂಥದು. ಅದು ಇನ್ನೂ ಬೆಳೆಯಲಿ, ಅವರಿಗೆ ಶುಭವಾಗಲಿ ಎಂದು ಹಾರೈಸುತ್ತೇನೆ.

**ಪ್ರೊ. ಎಲ್. ಎಸ್. ಶೇಷಗಿರಿರಾವ**